

ಉತ್ತಮರ ಸಂಗಯೆನಗಿತ್ತು ಸಲಹೋ ॥ ಪ ॥

ಚಿತ್ತಜ ಜನಕ ಸರ್ವೋತ್ತಮ ಮುಕುಂದ ॥ ಅ ಪ ॥

ತಿರುತಿರುಗಿ ಹುಟ್ಟಲಾರೆ ಪರರ ಬಾಧಿಸಲಾರೆ
ಪರಿಪರಿಯ ಪಾಪಗಳ ಮಾಡಲಾರೆ
ಮರಣ ಜನನಗಳೆರಡ ಪರಿಹರವ ಮಾಡಯ್ಯ
ಕರುಣಾಸಮುದ್ರ ಮುರವೈರಿ ಶ್ರೀಕೃಷ್ಣ 1

ಏನ ಪೇಳಲಿ ದೇವ ನಾ ಮಾಡಿದ ಕರ್ಮ
ನಾನಾ ವಿಚಿತ್ರವೈ ಶ್ರೀನಿವಾಸ
ಹೀನ ಜನರೊಳಗಾಟ ಶ್ವಾನಾದಿಗಳ ಕೂಟ
ಜ್ಞಾನವಂತನ ಮಾಡೋ ಜಾನಕೀ ರಮಣ 2

ನಿನ್ನ ನಂಬಿದ ಮೇಲೆ ಇನ್ನು ಭಯವ್ಯಾತಕೆ
ಪನ್ನಗಾಧಿಪಶಯನ ಮನ್ನಿಸಯ್ಯ
ಮುನ್ನ ಭಕುತರನೆಲ್ಲ ಚೆನ್ನಾಗಿ ಪಾಲಿಸಿದ
ಎನ್ನೊಡೆಯ ರಂಗವಿಠಲ ಎನ್ನ ದೊರೆಯೆ 3

ಶ್ರೀಪಾದರಾಜರು

ಸಂದರ್ಶಿಸಿ ! ಅನುಗ್ರಹೀತರಾಗಿರಿ !!

ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸಮಂಗಾಪುರ

# ಸಾಕ್ಷಾತ್ಕಾರ ವೈಭವ

ದಿನಾಂಕ **15—7—83**

ಶ್ರೀನಿವಾಸ ಮಂಗಾಪುರಕ್ಕೆ ತಿರುಪತಿಯಿಂದಲೂ, ಚಂದ್ರಗಿರಿಯಿಂದಲೂ ಬಸ್ ಸೌಕರ್ಯವಿದೆ. ತಿರುಪತಿಯ ಬಳಿಯೇ ಇರುವ ಶ್ರೀನಿವಾಸ ಮಂಗಾಪುರಕ್ಕೆ ಹೋಗಿ ದೇವರನ್ನು ದರ್ಶಿಸಿ ಬರುವುದೊಂದು ಅಪರೂಪದ ಅನುಭವ.

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ಇತರ ತಿರುಪತಿಯ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು ;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು ( 2 ಗಂಟೆಗಳಲ್ಲಿ )

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ ( ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ )

ಬಸ್ ಹೊರಡುವ ಕಾಲ : ಬೆಳಗ್ಗೆ 6-30, ಬೆಳಗ್ಗೆ 10-30. ಸಂಜೆ 4-30

ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
( ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ )

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳ ಬೇಕೆಂದು ವಿನಂತಿಸಿಲಾಗಿದೆ.

**ತಿ.ತಿ.ದೇ.**




ಗೌರವ ಸಂಪಾದಕರು:

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.

ಸಂಪಾದಕ:

ಕ ಸುಬ್ಬಾರಾವು, ಎಂ.ಎ.

ಉಪಸಂಪಾದಕ:

ಬಿ. ಎಸ್ ಶ್ರೀನಿವಾಸನ್ ಎಂ.ಎ.

ಮುದ್ರಣ

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು.

ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





**ಸಂಪುಟ ೧೪]　　ಜೂನ್ ೧೯೮೩　　[ಸಂಚಿಕೆ ೧**


# ವಿಷಯಸೂಚಿ



ಮುಖ ಪುಟದಲ್ಲಿ : ಪ್ರಗತಿಪಥದಲ್ಲಿ ಸಪ್ತಗಿರಿ

# ಸಂಪಾದಕೀಯ

ಧರ್ಮ ಅರ್ಥ ಕಾಮ ಮೋಕ್ಷಗಳು ಮಾನವ ಜೀವನದ ಪರಮ ಪುರುಷಾರ್ಥಗಳಾದರೂ, ಮನುಷ್ಯರ ನಡುವಣ ಸಂಬಂಧಗಳು ಆಹಾರ ನಿದ್ರಾಭಯ ಮೈಥುನಗಳಿಂದ ನಿಯಂತ್ರಿತವಾಗಿದ್ದರೂ, ಪ್ರಾಣಿಸಹಜ ಜೀವನಕ್ಕಿಂತ ಮೇಲೇರಿ ನಿಲ್ಲಲು ಧರ್ಮವೇ ಮೂಲಕಾರಣವೆಂದರೆ ತಪ್ಪಾಗಲಾರದು ಆ ಧರ್ಮವನ್ನು ವಿವರಿಸಲೆಂದೇ ಭಾಷೆಯ ಅಗತ್ಯ ಏರ್ಪಟ್ಟಿರಬೇಕು. ಹಂಚಿಕೊಂಡು ತಿನ್ನುವ, ಹಂಚಿಕೊಂಡು ಬಾಳುವ–ಸಹನಾಭವತು ಸಹನೌಭುನಕ್ತು–ಭಾವ ಉಂಟಾದಾಗಲೇ ನಿಜವಾಗಿಯೂ ಇನ್ನೊಬ್ಬರೊಡನೆ ಮಾತು ಆಡಬೇಕಾದ ಅಗತ್ಯವುಂಟಾಗುವುದು. ಎಂತಲೇ ಲಿಪಿಬದ್ಧ ಭಾಷೆಯ ಪ್ರಥಮ ಉದಾಹರಣೆಗಳು ಯುದ್ಧವಿಜಯಗಳಾಗದೆ ಧರ್ಮವಿಜಯಗಳಾಗಿರುವುವು. ಮೋಸೆಸನು ದೇವರಿಂದ ಪಡೆದ ಹತ್ತು ಆಜ್ಞೆಗಳಾಗಲೀ, ಅಶೋಕನ ಧರ್ಮಶಾಸನಗಳಾಗಲೀ, ಈ ಮಾತಿಗೆ ನಿದರ್ಶನವಾಗಬಲ್ಲವು. ಲಿಪಿಯ ಆವಿಷ್ಕರಣಕ್ಕೆ ಮುನ್ನವೂ ರಾಜಾಜ್ಞೆಗಳನ್ನು ಪ್ರಜೆಗಳಿಗೆ ತಿಳಿಸಲೂ, ಜನೋಪಯೋಗಿ ಸಮಾಚಾರಗಳನ್ನೂ ಹರಡಲೂ, ಹಳ್ಳಿಯ ಒಂದೆಡೆಯಲ್ಲಿ ಶಂಖವನ್ನೂದುವುದರಿಂದಲೋ, ತಮಟೆಯನ್ನು ಹೊಡೆಯುವುದರಿಂದಲೋ ಜನವನ್ನು ಒಟ್ಟಾಗಿ ಸೇರಿಸಿ ವಾರ್ತೆಗಳನ್ನು ಬಿತ್ತರಿಸಲಾಗುತ್ತಿತ್ತು. ಇದು ಇಂದಿಗೂ ಹಲವಾರು ಕಡೆ ಆಚರಣೆಯಲ್ಲಿರುವುದನ್ನು ಕಾಣಬಹುದು. ಕುದುರೆಯೇರಿದ ವಾರ್ತಾಹರರದೇ ಒಂದುವರ್ಗ ಸೃಷ್ಟಿಯಾಗಿದ್ದೂ ಹೀಗೆಯೇ. ರಾಜಾಜ್ಞೆಯೂ, ರಾಜ್ಯಶಾಸನವೂ ಧರ್ಮದಿಂದಲೇ ನಿಯಂತ್ರಿತ ಆಗಬೇಕಾಗಿರುವುದು ಎಲ್ಲ ಪ್ರಾಚೀನ ಅರ್ವಾಚೀನ ರಾಜ್ಯಗಳಲ್ಲೂ ಕಾಣಬರುವ ಸ್ಪಷ್ಟ ಲಕ್ಷಣ. ರಾಜರ ಪ್ರತ್ಯೇಕಾಸಕ್ತಿಗಳು ಏನೇ ಇದ್ದರೂ ಅವು ಧರ್ಮಕ್ಕೆ ಹೊಂದಿಕೊಂಡೇ ನಡೆದು ಒರುವ ಅಗತ್ಯವಿರುವುದರಿಂದಲೇ ರಾಜಾ ಪ್ರತ್ಯಕ್ಷ ದೇವತಾ ಎಂದರು. ಹಾಗಲ್ಲದೇ ರಾಜ ಧೂರ್ತನಾದಾಗ ಪ್ರಜೆಗಳೇ ವಾರ್ತೆಗಳನ್ನು ಹರಿಡಿದರು, ಧರ್ಮ ಯಾವುದೆಂಬುದನ್ನು ತಿಳಿಸಲು ಯತ್ನಿಸಿದರು, ಎಂಬುದನ್ನೂ ರೂಸೋ ಕದಂಬ ಮಯೂರ ವರ್ಮ, ಹಕ್ಕ, ಬುಕ್ಕ, ಶಿವಾಜಿ ಮೊದಲಾದವರಿಂದ ತಿಳಿಯಬಹುದು. ಮುದ್ರಣದ ಆವಿಷ್ಕಾರವಾದನಂತರ ವಾರ್ತಾ ಪತ್ರಿಕೆಗಳು ಉಂಟಾಗಿ, ಸರಕಾರಗಳ ಗೆಜೆಟ್ಟುಗಳು, ಸರಕಾರೀ ಪತ್ರಿಕೆಗಳೂ, ಸಾರ್ವಜನಿಕ ಪತ್ರಿಕೆಗಳೂ ತಮ್ಮ ತಮ್ಮ ಧ್ಯೇಯ ಧೋರಣೆಗಳಿಗೆ ಅನುಗುಣವಾಗಿ ವಾರ್ತಾಪ್ರಸಾರ ಕಾರ್ಯದಲ್ಲಿ ತೊಡಗಿದವು ಈಚೆಗೆ ರೇಡಿಯೋ ದೂರದರ್ಶನಗಳು ಈ ವಾರ್ತಾಹರ ಉದ್ದಿಮೆಯನ್ನು ಬೆಳೆಸಿವೆ. ಅಗಾಧವಾದ ಪ್ರಪಂಚವನ್ನು–ಅದರ ಪರಿಕಲ್ಪನೆಗಳನ್ನು–ಮಾನವ ಮನದ ಪುಟ್ಟ ಪಟಲದ ಮೇಲೆ ಪ್ರತಿಬಿಂಬಿಸಿ ಮನುಷ್ಯ ಹೆಚ್ಚು ಹೆಚ್ಚು ಜ್ಞಾನದತ್ತ ಬೆಳಕಿನತ್ತ ನಡೆಯಲು ಸಹಾಯಕವಾಗುತ್ತಿವೆ 'ಮೃತ್ಯೋರ್ಮಾ ಅಮೃತಂಗಮಯ'

ವಿವೇಕಶಾಲೀ ನಿರಂಕುಶ ಪ್ರಭುಗಳ ಕಾಲದಲ್ಲಿ ಅವರುಗಳ ಜನೋಪಯೋಗಿ ಭಾವನೆಗಳಿಂದಾಗಿ ಸಾರ್ವಜನಿಕ ಶಿಕ್ಷಣ ಮಟ್ಟ ಹೆಚ್ಚಿ ಹೊಸ ಹೊಸ ಪ್ರಯೋಗಗಳಿಗೆ ಎಡೆ ಮಾಡಿಕೊಟ್ಟಂತೆ, ರಾಜಕೀಯದಲ್ಲೂ ಹೊಸಹೊಸ ವಾದಗಳು, ಹೊಸ ಹೊಸ ವಿಧಾನಗಳೂ ಏರ್ಪಟ್ಟು ಸಾರ್ವಜನಿಕ ಜೀವನದಲ್ಲಿ ರಾಜಕಾರಣವೇ ಹೆಚ್ಚು ಪ್ರಾಮುಖ್ಯವನ್ನು ಸಂಪಾದಿಸಿ ಮುಂದುವರೆದು, ಪ್ರಜಾಪ್ರಭುತ್ವ, ಅಥವಾ ಇನ್ನಾವುದೇ ರಾಜಕೀಯ ವ್ಯವಸ್ಥೆಯಲ್ಲೂ ಎಲ್ಲವೂ ರಾಜಕಾರಣದ ಸುತ್ತಲೇ ತಿರುಗತೊಡಗಿ ವಾರ್ತಾ ಪ್ರತಿಕೆಗಳೂ ಅವುಗಳಿಗೇ ಪ್ರಾಧಾನ್ಯ ನೀಡುವಂತಾದರೂ ಎಲ್ಲ ರೀತಿಯ ರಾಜಕಾರಣವೂ, ವಾದಗಳೂ, ಸಂವಿಧಾನಗಳೂ, ಯಾವುದೋ ಒಂದು ಧರ್ಮದ ಅಡಿಗಲ್ಲಿನ ಮೇಲೆಯೇ ನಿಲ್ಲಲು ಸಾಧ್ಯಎಂಬುದನ್ನು ಮರೆಯುವಂತಿಲ್ಲ

ಜ್ಞಾನದ ಪರಿಧಿ ಹೆಚ್ಚಾಗುತ್ತ ನಡೆದಂತೆಲ್ಲಾ, ಅದರ ಪ್ರಸಾರ ಮಾಧ್ಯಮಗಳು ಎಷ್ಟೇ ವ್ಯಾಪಕವಾದರೂ, ಸೀಮಿತ ಎನ್ನುವ ಪರಿಸ್ಥಿತಿ ಉಂಟಾದಾಗ ಪತ್ರಿಕೆಗಳೂ ತಮ್ಮ ತಮ್ಮ ಪ್ರಸಾರವಿಷಯಪರಿಧಿಗಳನ್ನು ಸಂಕೋಚಗೊಳಿಸಿಕೊಳ್ಳಬೇಕಾದ ಅಗತ್ಯವುಂಟಾಯಿತು ಹಾಗಾಗಿ ರಾಜಕೀಯ ಪತ್ರಿಕೆ, ಸಾಂಸ್ಕೃತಿಕ ಪತ್ರಿಕೆ, ಶೈಕ್ಷಣಿಕ ಪತ್ರಿಕೆ, ವಾಣಿಜ್ಯ ಪತ್ರಿಕೆ ಹೀಗೆ ಹಲವಾರು, ಮನೋ ವಿಜ್ಞಾನಪತ್ರಿಕೆಯಿಂದ ಹೋರಾಶಾಸ್ತ್ರ ಪತ್ರಿಕೆಯವರಿಗೆ.

ಆದರೆ ಯಾವುದೊಂದೂ ಜೀವನದಲ್ಲಿ ಹೀಗೆ ಜಲನಿರ್ಬಂಧಕ ಆಗಿರಲಾರದೋ ಹಾಗೆಯೇ ಇಲ್ಲಿಯೂ ಸಹ. ಪರಸ್ಪರ ಪ್ರೋತ್ಸಾಹ, ಪ್ರಭಾವ ಪೂರಕತೆಗಳಿಂದಲೇ ಮುಂದುವರೆಯಬೇಕಾದ ಅನಿವಾರ್ಯತೆ ಈ ಇಪ್ಪತ್ತರ ಶತಮಾನದ್ದು ಇಂತಲ್ಲಿ ಸಪ್ತಗಿರಿ ಹದಿಮೂರುವರ್ಷಗಳ ಕಾಲ ತನ್ನ ಓದುಗರ, ಶ್ರೀ ವೆಂಕಟೇಶ್ವರನ ಭಕ್ತರ ಓದುವ ಅಪೇಕ್ಷೆಯನ್ನು ಪೂರೈಸುತ್ತ ಹದಿನಾಲ್ಕನೇ ವರ್ಷದಲ್ಲಿ ಕಾಲಿಡುತ್ತಿದೆ. ಇದಕ್ಕಾಗಿ ಶ್ರೀವೆಂಕಟೇಶ್ವರನಿಗೆ ಕೃತಜ್ಞತೆಯನ್ನು ಸಲ್ಲಿಸುತ್ತ ಮುಂದೆ ಮತ್ತೂ ವೈವಿಧ್ಯಮಯವಾಗಿ ಹೆಚ್ಚು ಹೆಚ್ಚು ಆಕರ್ಷಣೀಯವಾಗುವಂತೆ ಸಪ್ತಗಿರಿಯನ್ನು ಹೊರತರಲು ಅಪೇಕ್ಷಿಸುತ್ತ ಓದುಗರ ಜಾಹೀರಾತುದಾರರ ಬೆಂಬಲವನ್ನು ಕೋರುತ್ತೇವೆ.

# ಭಕ್ತಿಯ ಮಹಿಮೆ

ಡಾ॥ ಕೆ. ಕೃಷ್ಣಮೂರ್ತಿ

ಭಾರತದಲ್ಲಿ ವೈಷ್ಣವ, ಶೈವ, ಶಾಕ್ತ ಮುಂತಾದ ಎಲ್ಲ ಧಾರ್ಮಿಕ ಸಂಪ್ರದಾಯಗಳಲ್ಲೂ ಭಕ್ತಿಗೆ ಮೂಲಸ್ಥಾನ. ಇವಕ್ಕೆಲ್ಲ ವಿವರಣೆಗಳಾಗಿವೆ ಅಷ್ಟಾದಶ ಪುರಾಣಗಳು. ವೇದಾಂತ ಶಾಸ್ತ್ರದ ನವನೀತದಂತಿರುವ ಭಗವದ್ಗೀತೆಯಲ್ಲೂ ಭಕ್ತಿಯ ಪ್ರಾಶಸ್ತ್ಯ ಅಭೂತಪೂರ್ವವೆನಿಸುವಂತೆ ಭಗವಂತನ ವಾಣಿಯಾಗಿ ಹರಿದಿದೆ. ವೇದವಾಣಿಯಲ್ಲಿ ಭಕ್ತಿ ಪ್ರವಾಹದ ಪರೀವಾಹವೇ. ಇನ್ನು ರಾಮ, ಕೃಷ್ಣರನ್ನು ಕುರಿತ ಭಕ್ತಿ ಸಾಹಿತ್ಯ ಶತಮಾನಗಳಿಂದಲೂ ಜನಮನವನ್ನು ಭಾರತದ ಭಾಷೆಗಳಲ್ಲೆಲ್ಲ ಸಂತಸಾಹಿತ್ಯರಾಶಿಯಾಗಿ ಚಿಗುರಿಸಿ ಅರಳಿಸಿದೆ. ಶ್ರೀಸಾಮಾನ್ಯರ ಬಾಳಿಗೆ ಏಕೈಕ ಸಂದೀಪಕ ಸಂಜೀವನವೆನ್ನುವಂತೆ ಭಕ್ತಿ ಭಾರತದ ಹಿಂದಿನ ಸಾಹಿತ್ಯದಲ್ಲೆಲ್ಲ ಏಕಶ್ರುತಿಯಾಗಿ ವಿಜೃಂಭಿಸಿದೆ. ಆದರೆ ಇದರ ಸ್ವರೂಪ ನಿರ್ಣಯ ಮೇಲ್ನೋಟಕ್ಕೆ ಎನಿಸುವಷ್ಟು ಸುಲಭವಲ್ಲ. ನಂಬಿಕೆಯಿಂದ ಶ್ರದ್ಧೆಯಿಂದ ದೇವರಿಗೆ ಬಂದು ಹೂವೇರಿಸಿದರೆ, ಇಲ್ಲವೇ ಒಂದಿಷ್ಟು ದಾನ–ಧರ್ಮ ಮಾಡಿದರೆ, ಇಂದಿನವರು ಅದನ್ನು ಭಕ್ತಿಯೆಂದುಕೊಳ್ಳಬಹುದು. ಆದರೆ ನಿಜವಾದ ಭಕ್ತಿ, – ಆಗಮಗಳು ವಿವರಿಸುವ ಭಕ್ತಿ – ಬೇರೆಯೇ ಇದೆ. ಅದರ ದಿಕ್ಸೂಚನೆಯ ಒಂದು ಸಣ್ಣ ಪ್ರಯತ್ನವಾಗಿದೆ ಈ ಲೇಖನ.

ಭಕ್ತಿ ಶಾಸ್ತ್ರದಲ್ಲಿ ಹಾಗೂ ಅದ್ವೈತ ವೇದಾಂತಶಾಸ್ತ್ರದಲ್ಲಿ ದಿಗ್ಗಜರೆನಿಸಿಕೊಂಡವರಲ್ಲಿ ಮಧುಸೂದನ ಸರಸ್ವತಿಗಳು ಒಬ್ಬರು. ಇವರ ಕಾಲ ಹದಿನೇಳನೆಯ ಶತಮಾನ; ಪ್ರದೇಶ ಬಂಗಾಳ. ಅದ್ವೈತದ ವಾದಗ್ರಂಥಗಳಲ್ಲೆಲ್ಲ ಉಜ್ವಲ ರತ್ನದಂತಿದೆ, ಇವರ ಉದ್ಗ್ರಂಥವಾದ 'ಅದ್ವೈತ ಸಿದ್ಧಿ'. ಹಾಗೆಯೇ ಭಕ್ತಿಶಾಸ್ತ್ರದ ಉನ್ನತೋನ್ನತ ಗ್ರಂಥ 'ಭಕ್ತಿರಸಾಯನ'. "ಅವರ ಪಾಂಡಿತ್ಯದ ಸಾರವನ್ನು ಶಾರದೆಯೊಬ್ಬಳು ಕಂಡಿರಬಹುದು; ದೇವಿ ಶಾರದೆಯ ಸಾರವನ್ನು ಅವರೊಬ್ಬರೇ ಕಂಡಿರಬಹುದು."– ಎಂಬ ಬಿರುದು ಅವರದು –

ವೇತ್ತಿ ಪಾರಂ ಸರಸ್ವತ್ಯಾ
ಮಧುಸೂದನ ಸರಸ್ವತೀ ।
ಮಧುಸೂದನ ಸರಸ್ವತ್ಯಾಃ
ಪಾರಂ ವೇತ್ತಿ ಸರಸ್ವತೀ

ಇನ್ನು ಭಕ್ತಿಯನ್ನು ಕುರಿತಂತೆ ನಮಗಿರುವ ಚಿಂತನ ಒಳನೋಟ ಲಭ್ಯವಾಗಿರುವಂತೆ ಇತ್ತ ಸಾಹಿತ್ಯಸಾರ, ಅತ್ತ ವೇದಾಂತ ರಹಸ್ಯ ಎರಡನ್ನೂ ಸೂಚಿಸುವ ಕೊಂಡಿಯಂತಿದೆ "ರಸ" ಎಂದರೆ ಅಲೌಕಿಕ ದಿವ್ಯಾನಂದ. ಪರಮಾನಂದ ಎಂಬ ಅರ್ಥ ವೇದಕಾಲದಿಂದಲೂ ಉಂಟು. ಆದರೆ ಕಾವ್ಯಗಳಲ್ಲಿ ಶೃಂಗಾರಾದಿಗಳನ್ನು 'ರಸ' ಎನ್ನುವಾಗ ಕವಿ ಕಾವ್ಯ ಪಾತ್ರಗಳ ಮೂಲಕ ಅಭಿವ್ಯಕ್ತಗೊಳಿಸುವ ಮತ್ತು ಓದುಗರು ಮನಸ್ಸಿನಲ್ಲಿ ಆಸ್ವಾದಿಸುವ ಚಿತ್ತವೃತ್ತಿ ವಿಶೇಷಗಳೇ ಎಂಬುದು ಪ್ರಸಿದ್ಧಾರ್ಥ. ಆದ್ದರಿಂದ ಗೋಳು, ಗಂಡು – ಹೆಣ್ಣುಗಳ ಪ್ರೇಮ, ಭಯ, ವಿಸ್ಮಯ – ಮುಂತಾದುವೆಲ್ಲ ಲೌಕಿಕವಾದಾಗ 'ಸ್ಥಾಯೀಭಾವ'ಗಳೆಂದೂ, ಲೋಕ ಪ್ರತಿಬಿಂಬದ ಕನ್ನಡಿಯಾಗಿರುವ ಕಾವ್ಯದಲ್ಲಿ ಬಂದಾಗ ಅಲೌಕಿಕ 'ಕರುಣ' 'ಶೃಂಗಾರ' 'ಭಯಾನಕ' 'ಅದ್ಭುತ' – ಮುಂತಾಗಿ ರಸಗಳೆನಿಸುವುದೂ ಲಾಕ್ಷಣಿಕರ ಸಿದ್ಧಾಂತ. ಶೃಂಗಾರದ ಸ್ಥಾಯೀ ಭಾವವೇ 'ರತಿ'. ಇದು ಭಗವಂತನನ್ನು ಕುರಿತ ನಿರಂತರ ಪ್ರೇಮವಾದರೆ 'ಭಕ್ತಿ'. ಸಾಮಾನ್ಯವಾಗಿ ಜನರ ಬಾಳಲ್ಲಿ ಭಗವಂತನ ಸ್ಮರಣೆ ಸಂಕಟ ಬಂದಾಗಷ್ಟೇ ಉಂಟಾಗುತ್ತದೆ; ಸುರಕ್ಷಣದಲ್ಲಿ ಮಾಯವಾಗುತ್ತದೆ. ಪಂಡಿತರ ಬಾಳಲ್ಲಿ ಕೂಡ ದಿವ್ಯ ಪ್ರಬಂಧಗಳ, ಭಾಗವತಾದಿ ಪುರಾಣ ಗ್ರಂಥಗಳ ಅನುಸಂಧಾನ ಕಾಲದಲ್ಲಿ ಭಕ್ತಿ ಅಂಕುರಿಸುತ್ತದೆ; ವ್ಯವಹಾರ ಕಾಲದಲ್ಲಿ ಮರೆಯಾಗುತ್ತದೆ. ಆದ್ದರಿಂದ ಮನುಷ್ಯನ ನಿತ್ಯಜೀವನದ ಆಹಾರ – ವಿಹಾರಗಳನ್ನೆಲ್ಲ, ಎಚ್ಚರ – ನಿದ್ದೆಗಳನ್ನೆಲ್ಲ, ಸಾಮಾಜಿಕ – ವೈಯುಕ್ತಿಕ ದೈನಂದಿನ ಕಾರ್ಯಗಳನ್ನೆಲ್ಲ, ಭಕ್ತಿಯೊಂದೇ ಆವರಿಸುವ ಉದಾಹರಣೆಗಳು ಸಂತರಲ್ಲಿ ಮಾತ್ರ ದೊರೆಯುವುದೇ ಹೊರತು ಸಾಮಾನ್ಯರಲ್ಲಿ ಅಲ್ಲ. ಆದುದರಿಂದ ಇಂತಹ ಸಾಮಾನ್ಯರ ಲೌಕಿಕ ಕ್ಷಣಿಕ ಭಕ್ತಿಯನ್ನು 'ರಸ'ವೆನ್ನುವುದು ಶಾಸ್ತ್ರಕಾರರಿಗೆ ಸಮ್ಮತವಲ್ಲ. ಅದು ಸ್ಥಾಯಿಯಾದ ಚಿತ್ತವೃತ್ತಿಯುಳ್ಳವಾಗಿ 'ಸ್ಥಾಯೀಭಾವ'ವೆಂಬ ವರ್ಗಕ್ಕೂ ಸೇರದು. ಏನಿದ್ದರೂ ಅದೊಂದು ಒಮ್ಮೆ ತೋರಿ ಇನ್ನೊಮ್ಮೆ ಅಡಗುವ 'ಸಂಚಾರಿಭಾವ' ಮಾತ್ರ. ಸಮುದ್ರದಲ್ಲಿ ಅಲೆ ಏರಿ ಬಂದು ಮರುಕ್ಷಣ ಇಳಿಯುವಂತೆ ಅವುಗಳ ಸ್ಥಿತಿ.

ಆದರೆ ನಿಜವಾದ ಭಕ್ತಿಯ ಸ್ವರೂಪವೇನು? ಸ್ಥಾನವೇನು? ಎಂಬುದನ್ನು ನಿಗಮಾಗಮ – ಪುರಾಣಾದಿಗಳ ಮೇಲಿಂದ ಸರಿಯಾಗಿ ಅರಿತುದಾದರೆ 'ಭಕ್ತಿ' ರಸವಷ್ಟೇ ಅಲ್ಲ; ಏಕೈಕ ರಸ ಎಂಬ ಅದರ ವೈಭವದ ಪರಿಚಯ ನಮಗಾಗುತ್ತದೆ. ಭಗವಂತನು ಮನುಷ್ಯ ಲೋಕದಲ್ಲಿ ಅವತಾರಮಾಡಿ ತನ್ನ ಲೀಲಾ ವಿಲಾಸಗಳನ್ನು ಮೆರೆದಿರುವುದೇ ಈ ದೃಷ್ಟಿಯಿಂದ. ಭಗವಂತನನ್ನು ಮಗುವೆಂದು ಭ್ರಮಿಸಿ ಆಡಿಸಿದ ಯಶೋದೆಯಿರಲಿ, ಆಟದ ಒಡನಾಡಿಯೆಂದು ಭಾವಿಸಿದ ಗೋಪಾಲ ಬಾಲಕರಿರಲಿ, ತಮ್ಮ ಮನದನ್ನನೆಂದು ಅನುರಕ್ತರಾಗಿ ಆತ್ಮಾರ್ಪಣೆ ಮಾಡಿಕೊಂಡ ಗೋಪಸ್ತ್ರೀಯರಿರಲಿ, ಪ್ರಭುವೆಂದು ಸೇವೆಗೈದ ಅನುಚರರೇ ಇರಲಿ – ಕಡೆಗೆ ಕಡುವೈರಿಯೆಂದು ಅವನ ಮೇಲೆ ಏರಿಹೋಗಿ ಅವನಿಂದ ಹತರಾದ ಆಸುರೀಜನರೇ ಇರಲಿ – ಎಲ್ಲರಿಗೂ ಭಗವಂತನ ಬಗ್ಗೆ ನಿರಂತರವಾದ ಚಿತ್ತಸಂಪರ್ಕ ಬರುತ್ತದೆ. ಆ ಚಿತ್ತಸಂಪರ್ಕವನ್ನವರು ಭಕ್ತಿಯೆಂದು ಭಾವಿಸಿರಲಿ, ಭಾವಿಸದಿರಲಿ– ಇಂದು ಅದನ್ನು ಓದುವ ನಮಗೆಲ್ಲ ಅದು ಭಕ್ತಿಯ ನಿಜಸ್ವರೂಪವನ್ನು ಬೆಳಗಿಸುವ,

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

**ತಿ. ತಿ. ದೇ.**

ಆನಂದಸಾಗರದಲ್ಲಿ ತೇಲಿಸುವ ಸಾಧನವಾಗುತ್ತದೆ ಎಂಬುದೇ ಮಧುಸೂದನ ಸರಸ್ವತಿಗಳ ವಿನೂತನ ವ್ಯಾಖ್ಯೆ. ಭಾರತದಲ್ಲಿರುವಷ್ಟು ವಿಶಾಲವಾದ ಭಕ್ತಿಸಾಹಿತ್ಯ ವಿಶ್ವದ ಮತ್ತಾವ ದೇಶದಲ್ಲೂ ಇಲ್ಲ. ಅದು ಕೇಳುವ ಪಾಮರರಿಗೆ ದಿವ್ಯಸುಧೆ; ಹೇಳುವ ಪಂಡಿತರಿಗೆ ಜ್ಞಾನ ಬೋಧೆ– ಮಾಧ್ಯಮ ಮನೋರಂಜಕವಾಗಿರುವಂತೆ, ಮರ್ಮ ಮಾತ್ರ ಸಕಲ ವೇದಾಂತಗಳ ಸಾರ ಸರ್ವಸ್ವವೂ ಆಗಿರುತ್ತದೆ.

ವಾದಕ್ಕಾಗಿ ಶಾಸ್ತ್ರವನ್ನು ಗಡುಚಾಗಿಸುವ ನೆಲೆಯೇ ಬೇರೆ; ಅನುಭವಕ್ಕಾಗಿ ಅದರ ಸಾರಸಾರಾಯವನ್ನು ಹೃದಯಕ್ಕೆ ಮನಗಾಣಿಸುವ ಕಲೆಯೇ ಬೇರೆ. ಎರಡನ್ನೂ ಅಭೂತಪೂರ್ವವಾಗಿ ಸಮನ್ವಯಗೊಳಿಸಿರುವ ಸಾಧನೆ ಭಾರತೀಯ ಭಕ್ತಿಸಾಹಿತ್ಯದ್ದು. ಇದು ಪ್ರೌಢ – ಗಂಭೀರ ಪದಾವಳಿಗಳಿಂದ ಪುಷ್ಟಿಗೊಂಡ ಸಂಸ್ಕೃತ ಸ್ತೋತ್ರವಾಗಬಹುದು ; ಲಲಿತ – ಮಧುರ ದೇಶ್ಯ ಸಂಗೀತಕ್ಕೆ ಅಳವಟ್ಟ ಕನ್ನಡ, ಆಂಧ್ರ, ತಮಿಳು ಭಾಷೆಗಳ ಗೀತಪದಗಳೂ ಆಗಬಹುದು. ಭಗವಂತನ ಲೀಲೆಗಳನ್ನೂ ವಿಸ್ತಾರವಾಗಿ ಬಣ್ಣಿಸುವ ಮಹಾಕಾವ್ಯವಾಗ ಬಹುದು. ಭಕ್ತನ ಆರ್ತ ಮನೋಭಾವದ ಹೃದಯೋದ್ಗಾರ ಅಥವಾ ಮೊರೆಯನ್ನು ಮೂಡಿಸುವ ಚಿಕ್ಕ ಪ್ರಾರ್ಥನಾ ಪದವೂ ಇರಬಹುದು. ಭಗವಂತನನ್ನು ಶಿವ, ವಿಷ್ಣು, ದೇವಿ – ಮುಂತಾಗಿ ಯಾವುದೇ ಹೆಸರಿಂದಲೂ ನಿರ್ದೇಶಿಸಿರಬಹುದು. ಇಂತಹ ಭಕ್ತಿಯ ಪ್ರಕಾಶ ಏಕಕಾಲಕ್ಕೆ ರಸಾವೇಶವನ್ನೂ ರಸಿಕನಲ್ಲಿ ಆನಂದಲೇಶವನ್ನೂ ಸಹಜವಾಗಿ ಹಾಗು ಸಮರ್ಥವಾಗಿ ಒದಗಿಸುವ ಅಪೂರ್ವ ಶಕ್ತಿಯನ್ನು ಪಡೆದಿದೆ. ಅದನ್ನು ಅನುಭವಿಸಿ ಅರಿತವರೇ ಧನ್ಯರು. ಅವರೇ ಜೀವನದ ಜಂಜಾಟದಿಂದ ಬಿಡುಗಡೆ ಪಡೆದ ಪುಣ್ಯವಂತರು. ಅವರಿಗೆ ಆನಂದದ ಜೊತೆಜೊತೆಗೇ ದಿವ್ಯಜ್ಞಾನವೂ ಲಭಿಸಿರುತ್ತದೆ. ಅವರು ಮಾಡಿದ ಕೃತಿಯೆಲ್ಲ ಭಗವದರ್ಪಿತವಾಗಿ ಸಾರ್ಥಕವಾಗುತ್ತದೆ. ಅವರು ನಿಜವಾಗಿ ಸುಖ – ದುಃಖ

(35 ನೇ ಪುಟ ನೋಡಿ)

( ಮುಂದು ವರಿದದ್ದು )

# ಶ್ರೀ ಮದ್ಭಗವದ್ಗೀತೆ

## ೨ ನೆಯ ಅಧ್ಯಾಯ

## ಆತ್ಮನ ಸ್ವರೂಪ

ಸಂಜಯ ಉವಾಚ :

ತಂ ತಥಾ ಕೃಪಯಾವಿಷ್ಟಂ
ಅಶ್ರುಪೂರ್ಣಾಕುಲೇಕ್ಷಣಮ್ ।
ವಿಷೀದಂತಮಿದಂ ವಾಕ್ಯಂ
ಉವಾಚ ಮಧುಸೂದನಃ ॥ 1

ಸಂಜಯ : ಹಾಗೆ ಮರುಕ ತುಂಬಿ ಮುಂದುಗಾಣದೆ ವ್ಯಥೆಗೊಳ್ಳುತ್ತಿರುವ ಅರ್ಜುನನನ್ನು ಕುರಿತು ಕೃಷ್ಣನು ಈ ಮಾತನ್ನು ಹೇಳಿದನು.

ಶ್ರೀ ಭಗವಾನುವಾಚ :

ಕುತಸ್ತ್ವಾ ಕಶ್ಮಲಮಿದಂ
ವಿಷಮೇ ಸಮುಪಸ್ಥಿತಮ್ ।
ಅನಾರ್ಯಜುಷ್ಟಮಸ್ವರ್ಗ್ಯ
ಮಕೀರ್ತಿಕರಮರ್ಜುನ ॥ 2

ಶ್ರೀಕೃಷ್ಣ . ಅರ್ಜುನ, ಬಲ್ಲವರು ಮೆಚ್ಚದ, ಸ್ವರ್ಗಕ್ಕೆ ಒಯ್ಯದ ಮತ್ತು ಕೆಟ್ಟ ಹೆಸರನ್ನು ತರುವ ಈ ದೌರ್ಬಲ್ಯ ನಿನಗೆ ಬರಬಾರದ ಕಡೆ ಹೇಗೆ ಬಂತು ?

ಕ್ಲೈಬ್ಯಂ ಮಾ ಸ್ಮಗಮಃ ಪಾರ್ಥ
ನೈತತ್ ತ್ವಯ್ಯುಪಪದ್ಯತೇ ।
ಕ್ಷುದ್ರಂ ಹೃದಯದೌರ್ಬಲ್ಯಂ
ತ್ಯಕ್ತ್ವೋತ್ತಿಷ್ಠ ಪರಂತಪ ॥ 3

ಅರ್ಜುನ, ಎದೆಗೇಡಿಯಾಗಬೇಡ, ನಿನಗೆ ಇದು ತರವಲ್ಲ. ಹಗೆಗಳನ್ನು ಗಡಗುಟ್ಟಿಸುವ ವೀರನೇ ಕೀಳಾದ ಅಳುಕನ್ನು ಕೊಡವಿಹಾಕಿ ಎದ್ದೇಳು.

ಅರ್ಜುನ ಉವಾಚ :

ಕಥಂ ಭೀಷ್ಮಮಹಂ ಸಂಖ್ಯೇ
ದ್ರೋಣಂ ಚ ಮಧುಸೂದನ ।
ಇಷುಭಿಃ ಪ್ರತಿಯೋತ್ಸ್ಯಾಮಿ
ಪೂಜಾರ್ಹಾವರಿಸೂದನ ॥ 4

ಅರ್ಜುನ : ಕೃಷ್ಣ, ನನ್ನಿಂದ ಪೂಜೆಗೊಳ್ಳುವುದಕ್ಕೆ ತಕ್ಕವರಾದ ಭೀಷ್ಮರನ್ನೂ ದ್ರೋಣರನ್ನೂ ನಾನು ಯುದ್ಧದಲ್ಲಿ ಹೇಗೆ ಬಾಣಗಳಿಂದ ಹೊಡೆಯಲಿ ?

ಗುರೂನಹತ್ವಾ ಹಿ ಮಹಾನುಭಾವಾನ್
ಶ್ರೇಯೋ ಭೋಕ್ತುಂ
ಭೈಕ್ಷ್ಯಮಪೀಹ ಲೋಕೇ ।
ಹತ್ವಾರ್ಥಕಾಮಾಂಸ್ತು ಗುರೂನಿಹೈವ
ಭುಂಜೀಯ ಭೋಗಾನ್
ರುಧಿರಪ್ರದಿಗ್ಧಾನ್ ॥ 5

ಮಹಾತ್ಮರಾದ ಗುರುಗಳನ್ನು ಕೊಲ್ಲುವ ಬದಲು ಈ ಲೋಕದಲ್ಲಿ ತಿರಿದು ತಿನ್ನುವುದಾದರೂ ಮೇಲು. ದುಡ್ಡಿನಾಸೆಯಿಂದ ಯುದ್ಧಕ್ಕೆ ನಿಂತಿರುವ ಗುರುಗಳನ್ನು ಕೊಂದು ಅವರ ನೆತ್ತರಿನಿಂದ ತೊಯ್ದ ರಾಜಭೋಗವನ್ನು ನಾನಿಲ್ಲಿ ಉಣಬೇಕು !

ನ ಚೈತದ್ವಿದ್ಮಃ ಕತರನ್ನೋ ಗರೀಯೋ
ಯದ್ವಾ ಜಯೇಮ ಯದಿ
ವಾ ನೋ ಜಯೇಯುಃ ।
ಯಾನೇವ ಹತ್ವಾ ನ ಜಿಜೀವಿಷಾಮಃ
ತೇಽವಸ್ಥಿತಾಃ ಪ್ರಮುಖೇ
ಧಾರ್ತರಾಷ್ಟ್ರಾಃ ॥ 6

ಯಾವುದು ಸರಿಯೋ ಯಾವುದು ತಪ್ಪೋ ಗೊತ್ತಿಲ್ಲ. ನಾವು ಗೆಲ್ಲುವೆವೋ ಅಥವಾ ಅವರೇ ನಮ್ಮನ್ನು ಗೆಲ್ಲುವರೋ ಅದೂ ಗೊತ್ತಿಲ್ಲ. ಯಾರನ್ನು ಕೊಂದು ನಾವು ಬದುಕ ಬಯಸುವುದಿಲ್ಲವೋ ಅಂಥ ಕೌರವರೇ ಎದುರಿಗೆ ನಿಂತಿದ್ದಾರೆ.

ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿ ತ್ವಾಂ
ಧರ್ಮಸಂಮೂಢಚೇತಾಃ ।
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ
ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ
ತ್ವಾಂ ಪ್ರಪನ್ನಮ್ ॥ 7

ದೈನ್ಯದಿಂದ ಕಂಗೆಟ್ಟಿದ್ದೇನೆ. ಧರ್ಮದ ಬಗೆಗೆ ಮನಸ್ಸು ನಿರ್ಧರಿಸಲಾರದಾಗಿದೆ. ಆದ್ದರಿಂದ ನಿನ್ನನ್ನು ಕೇಳಿಕೊಳ್ಳುತ್ತೇನೆ ಯಾವುದು ಸರಿ ಎಂಬುದನ್ನು ನೀನೆ ನನಗೆ ತಿಳಿಹೇಳಬೇಕು. ನಾನು ನಿನ್ನ ಶಿಷ್ಯ. ಶರಣು ಬಂದಿರುವ ನನಗೆ ನೀನೇ ದಾರಿ ತೋರಬೇಕು.

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ-
ದ್ಯಚ್ಛೋಕಮುಚ್ಛೋಷಣಮಿಂದ್ರಿ
ಯಾಣಾಮ್ ।
ಅವಾಪ್ಯ ಭೂಮಾವಸಪತ್ನಮೃದ್ಧಂ
ರಾಜ್ಯಂ ಸುರಾಣಾಮಪಿ
ಚಾಧಿಪತ್ಯಮ್ ॥ 8



ಹಗೆಗಳಿಲ್ಲದ ಸಮೃದ್ಧವಾದ ಇಡಿಯ ಭೂಮಂಡಲದ ಒಡೆತನ ಅಥವಾ ದೇವಲೋಕದ ಒಡೆತನವೇ ದೊರೆತರೂ ನನ್ನ ಇಂದ್ರಿಯಗಳನ್ನೆಲ್ಲ ಸೊರಗಿಸುವಂಥ ಈ ದುಃಖವು ಕಳೆದೀತೆಂದು ನನಗೆ ಕಾಣುವುದಿಲ್ಲ.

ಸಂಜಯ ಉವಾಚ .

ಏವಮುಕ್ತ್ವಾ ಹೃಷೀಕೇಶಂ
ಗುಡಾಕೇಶಃ ಪರಂತಪಃ ।
ನ ಯೋತ್ಸ್ಯ ಇತಿ ಗೋವಿಂದಂ
ಉಕ್ತ್ವಾ ತೂಷ್ಣೀಂ ಬಭೂವ ಹ ॥ 9

ಸಂಜಯ : ಹಗೆಗಳನ್ನು ಗಡಗುಟ್ಟಿಸುವ ಅರ್ಜುನನು ಕೃಷ್ಣನನ್ನು ಕುರಿತು ಹೀಗೆ ಹೇಳಿ, 'ನಾನು ಕಾದಲಾರೆ' ಎಂದು ಸುಮ್ಮನಾದನು.

ತಮುವಾಚ ಹೃಷೀಕೇಶಃ
ಪ್ರಹಸನ್ನಿವ ಭಾರತ ।
ಸೇನಯೋರುಭಯೋರ್ಮಧ್ಯೇ
ವಿಷೀದಂತಮಿದಂ ವಚಃ ॥ 10

ಧೃತರಾಷ್ಟ್ರನೇ, ಎರಡು ದಂಡುಗಳ ನಡುವೆ ವ್ಯಥೆಗೊಳ್ಳುತ್ತಿರುವ ಅರ್ಜುನನನ್ನು ಕುರಿತು ಕೃಷ್ಣನು ಮುಗುಳುನಗುತ್ತಲೇ ಹೀಗೆ ಹೇಳಿದನು ;

ಶ್ರೀಭಗವಾನುವಾಚ :

ಅಶೋಚ್ಯಾನನ್ವಶೋಚಸ್ತ್ವಂ
ಪ್ರಜ್ಞಾವಾದಾಂಶ್ಚ ಭಾಷಸೇ ।
ಗತಾಸೂನಗತಾಸೂಂಶ್ಚ
ನಾನುಶೋಚಂತಿ ಪಂಡಿತಾಃ ॥ 11

ಶ್ರೀಕೃಷ್ಣ : ನೀನು ಯಾರಿಗಾಗಿ ಅಳಬಾರದೋ, ಅವರಿಗಾಗಿ ಅಳುತ್ತಿ ; ಜಾಣನಂತೆ ಮಾತುಗಳನ್ನೂ ಆಡುತ್ತಿ. ತಿಳಿದವರು ಸತ್ತವರಿಗಾಗಲಿ ಸಾಯುವವರಿಗಾಗಲಿ ಅಳುವುದಿಲ್ಲ.

ನ ತ್ವೇವಾಹಂ ಜಾತು ನಾಸಂ
ನ ತ್ವಂ ನೇಮೇ ಜನಾಧಿಪಾಃ ।
ನ ಚೈವ ನ ಭವಿಷ್ಯಾಮಃ
ಸರ್ವೇ ವಯಮತಃ ಪರಮ್ ॥ 12

ನಾನು, ನೀನು, ಅರಸರು – ಹಿಂದೆಂದೂ ಇಲ್ಲವೆಂದಾದುದಿಲ್ಲ. ಮುಂದೆಯೂ ನಾವೆಲ್ಲರೂ ಇಲ್ಲವಾಗಲಾರೆವು.

ದೇಹಿನೋಽಸ್ಮಿನ್ ಯಥಾ ದೇಹೇ
ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರಪ್ರಾಪ್ತಿಃ
ಧೀರಸ್ತತ್ರ ನ ಮುಹ್ಯತಿ ॥ 13

ಜೀವನಿಗೆ ಈ ದೇಹದಲ್ಲಿ ಬಾಲ್ಯ, ಪ್ರಾಯ, ಮುಪ್ಪು ಹೇಗೆ ಹಾಗೆ, ಬೇರೆ ದೇಹ ಬರುವುದು. ಈ ವಿಷಯದಲ್ಲಿ ಜಾಣರು ಕಂಗೆಡುವುದಿಲ್ಲ.

ಮಾತ್ರಾಸ್ಪರ್ಶಾಸ್ತು ಕೌಂತೇಯ
ಶೀತೋಷ್ಣ ಸುಖದುಃಖದಾಃ ।
ಆಗಮಾಪಾಯಿನೋಽನಿತ್ಯಾಃ
ತಾಂ ತಿತಿಕ್ಷಸ್ವ ಭಾರತ ॥ 14

ಅರ್ಜುನ, ಶೀತ – ಉಷ್ಣಗಳ ಸ್ಪರ್ಶದಿಂದ ನಮ್ಮ ಮೈಗೂ ಶೀತ-ಉಷ್ಣಗಳ ಅನುಭವವಾಗುತ್ತದೆ. ಅದರಿಂದ ಸುಖವೋ, ದುಃಖವೋ ಆಗುತ್ತದೆ. ಹಾಗೆಯೇ ವಿಷಯ ಸಂಪರ್ಕಗಳೇ ಸುಖವನ್ನೂ ದುಃಖವನ್ನೂ ಕೊಡತಕ್ಕವುಗಳು. ಕ್ಷಣಿಕವಾಗಿ ಬಂದು ಹೋಗುವವುಗಳು. ಅವು ನೆಲೆಯಾಗಿರತಕ್ಕವುಗಳಲ್ಲ. ಅವುಗಳನ್ನು ತಡೆದುಕೋ.

ಯಂ ಹಿ ನ ವ್ಯಥಯಂತ್ಯೇತೇ
ಪುರುಷಂ ಪುರುಷರ್ಷಭ ।
ಸಮದುಃಖಸುಖಂ ಧೀರಂ
ಸೋಽಮೃತತ್ವಾಯ ಕಲ್ಪತೇ ॥ 15

ಅರ್ಜುನ, ಸುಖ-ದುಃಖಗಳಲ್ಲಿ ಒಂದೇ ತೆರನಾಗಿರುವ ಯಾವ ಧೀರನನ್ನೂ ಇವು ವ್ಯಥೆಗೊಳಿಸುವು

(33 ನೇ ಪುಟ ನೋಡಿ )

# ತ್ಯಾಗರಾಜರ ಸಂಸ್ಕೃತ ಕೃತಿಗಳಲ್ಲಿ ಭಕ್ತಿ

ಡಾ॥ ಯಂ. ವಿ. ಸಂಪತ್ ಕುಮಾರಾಚಾರ್ಯ

ಸದ್ಗುರು ತ್ಯಾಗರಾಜರು ಕರ್ನಾಟಕ ಸಂಗೀತ ಲೋಕದ ಧ್ರುವತಾರೆ. ಪುಷ್ಯ ಬಹುಳ ಪಂಚಮಿಯು ಅವರ ಆರಾಧನಾ ಮಹೋತ್ಸವದ ಪುಣ್ಯದಿನ. ಅವರು ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಅತ್ಯಂತ ಪ್ರಸಿದ್ಧರು. ಅವರ ಪಟ್ಟ ಶಿಷ್ಯರಾದ ವಾಲಾಜಪೇಟೆ ವೆಂಕಟರಮಣ ಭಾಗವತರು ಅವರ ಹಿರಿಮೆಯನ್ನು ಈ ರೀತಿ ಸ್ತುತಿಸಿದ್ದಾರೆ.

ವ್ಯಾಸೋನೈಗಮಚರ್ಚಯಾ
ಮೃದುಗಿರಾ ವಲ್ಮೀಕಜನ್ಮಾಮುನಿಃ ।
ವೈರಾಗ್ಯೇ ಶುಕ ಏವ ಭಕ್ತಿ
ವಿಷಯೇ ಪ್ರಹ್ಲಾದ ಏವ ಸ್ವಯಂ ॥

ಬ್ರಹ್ಮಾನಾರದ ಏವ ಚಾಽ
ಪ್ರತಿಮಯೋಸ್ಸಾಹಿತ್ಯ ಸಂಗೀತಯೋಃ
ಯೋ ರಾಮಾಮೃತಪಾನ
ನಿರ್ಜಿತ ಶಿವಃ ತಂ ತ್ಯಾಗರಾಜಂ ಭಜೇ

ತ್ಯಾಗರಾಜರು ವೇದವೇದಾಂತಗಳ ರಹಸ್ಯವನ್ನು ತಮ್ಮ ಕೃತಿಗಳ ಮೂಲಕ ವ್ಯಕ್ತಪಡಿಸುವುದರಲ್ಲಿ ವ್ಯಾಸಮಹರ್ಷಿಗಳಿಗೆ ಸಮಾನ; ಮೃದು ಮಧುರವಾದ ಪದ ಲಾಲಿತ್ಯದಿಂದ ಕೂಡಿದ ಸಾಹಿತ್ಯ ರಚನೆಯಲ್ಲಿ ವಾಲ್ಮೀಕಿ ಮಹರ್ಷಿಗಳಿಗೆ ಸಮಾನ; ವೈರಾಗ್ಯದಲ್ಲಿ ಶುಕ ಮಹರ್ಷಿಗೂ, ಭಕ್ತಿಯಲ್ಲಿ ಪ್ರಹ್ಲಾದನಿಗೂ, ಸಂಗೀತ ಮತ್ತು ಸಾಹಿತ್ಯದಲ್ಲಿ ಬ್ರಹ್ಮ ಮತ್ತು ನಾರದರಿಗೆ ಸಮಾನ. ಇಂಥಾ ನನ್ನ ಗುರುವರ್ಯರನ್ನು ಭಜಿಸುತ್ತೇನೆ ಎಂದಿದ್ದಾರೆ.

ಕರ್ನಾಟಕ ಸಂಗೀತದ ಇತಿಹಾಸದಲ್ಲಿ ತ್ಯಾಗರಾಜರ ಸ್ಥಾನ ವಿಶಿಷ್ಟವಾದುದು. ಇವರ ಪ್ರತಿಭೆ, ಔನ್ನತ್ಯ, ಆಧ್ಯಾತ್ಮಿಕ ಸಂಪತ್ತು ಉಳಿದ ಯಾವ ವಾಗ್ಗೇಯಕಾರರಿಗೂ ಇರಲಿಲ್ಲವೆನ್ನಬಹುದು. ಇವರು ಕರ್ನಾಟಕ ಸಂಗೀತದ ಮೇಲೆ ಕಾಲಗತಿಯಿಂದ ಮಾಸಿ ಹೋಗದಂತಹ ಪ್ರಭಾವ ಬೀರಿದ್ದಾರೆ. ಇವರ ಕೃತಿಗಳು ಸಂಗೀತ, ಸಾಹಿತ್ಯ ಮತ್ತು ಭಗವದ್ಭಕ್ತಿಯ ತ್ರಿವೇಣೀ ಸಂಗಮ. ಇವರು ಪ್ರಹ್ಲಾದನಂತೆ ಅಗ್ರ್ಯ ಭಾಗವತರು. ನಾದಯೋಗಿ ಸಂಗೀತ ಸ್ಮೃತಿಕಾರರು, ಮೇಲಾಗಿ ರಾಮಾಯಣ ವಾಗ್ಗೇಯಕಾರರು. ಇವರನ್ನು ಭೂಲೋಕ ನಾರದರೆಂದು ಕರೆಯುವುದು ವಾಡಿಕೆ. ವಾಲ್ಮೀಕಿ ರಾಮಾಯಣದಲ್ಲಿ 24 000 ಶ್ಲೋಕಗಳಿರುವಂತೆ ಇವರೂ ಸಹ 24,000 ಕೃತಿಗಳನ್ನು ರಚಿಸಿದ್ದರೆಂದು ಪ್ರತೀತಿ. ಆದರೆ ಇಂದು ನಮಗೆ ಲಭ್ಯವಿರುವುದು ಸುಮಾರು ಒಂದು ಸಾವಿರ ಕೃತಿಗಳಷ್ಟು. ಇವುಗಳಲ್ಲಿ ಸುಮಾರು 45 ಕೃತಿಗಳು ಸಂಪೂರ್ಣವಾಗಿ ಸಂಸ್ಕೃತ ಭಾಷೆಯಲ್ಲಿ ರಚಿತವಾಗಿವೆ. ತ್ಯಾಗರಾಜರು ತಮ್ಮ ಮಾತೃಭಾಷೆಯಾದ ತೆಲುಗಿನಲ್ಲೇ ಹೆಚ್ಚು ಕೃತಿಗಳನ್ನು ರಚಿಸಿದ್ದರೂ, ಅವುಗಳ ಹೆಚ್ಚು ಭಾಗ ಸಂಸ್ಕೃತ ಪದಗಳಿಂದ ಕೂಡಿವೆ. ಕೆಲವು ಕೃತಿಗಳು ಸಂಸ್ಕೃತದಲ್ಲಿ ಪ್ರಾರಂಭವಾಗುತ್ತವೆ. ಕೆಲವು ಕೃತಿಗಳ ಕೊನೆಯ ಭಾಗವು ಸಂಸ್ಕೃತದಲ್ಲಿದೆ.

ತ್ಯಾಗರಾಜರಿಗೆ ಸಂಸ್ಕೃತ ಮತ್ತು ವೇದಾಂತ ಪರಿಚಯವು ಅಭ್ಯಾಸ ಬಲದಿಂದ ಬಂದಿತ್ತು. ಇವನ್ನು ತಮ್ಮ ತಂದೆಯವರಲ್ಲೇ ಅಭ್ಯಾಸಮಾಡಿದ್ದರು. ಇವರ ತಂದೆ ರಾಮಬ್ರಹ್ಮರು ತಂಜಾವೂರಿನ ಇಮ್ಮಡಿ ತುಳಜಾಜಿ ಮಹಾರಾಜನ ( 1763 – 1687 ) ಆಹ್ವಾನದ ಮೇಲೆ ಆಗಾಗ್ಗೆ ಆಸ್ಥಾನದಲ್ಲಿ ಪುರಾಣಗಳೇ ಮುಂತಾದ ಅನೇಕ ಧರ್ಮಗ್ರಂಥಗಳ ಪ್ರವಚನವನ್ನು ನಡೆಸುತ್ತಿದ್ದರು. ಈ ಸಂದರ್ಭಗಳಲ್ಲಿ ಮಗನಾದ ತ್ಯಾಗರಾಜನನ್ನು ತಮ್ಮ ಸಂಗಡ ಕರೆದುಕೊಂಡು ಹೋಗಿ ಅವನಿಂದ ಮೂಲ ಶ್ಲೋಕಗಳನ್ನು ಓದಿಸಿ ತಾವು ವ್ಯಾಖ್ಯಾನ ಮಾಡುತ್ತಿದ್ದರು. ಇದಲ್ಲದೆ ತ್ಯಾಗರಾಜರ ಕಾಲಕ್ಕೆ ಸ್ವಲ್ಪ ಹಿಂದೆ ನಾರಾಯಣ ತೀರ್ಥರು, ಸದಾಶಿವ ಬ್ರಹ್ಮೇಂದ್ರರು. ಉಪನಿಷತ್ ಬ್ರಹ್ಮೇಂದ್ರರು ಮತ್ತು ಮಾರ್ಗದರ್ಶಿ ಶೇಷಅಯ್ಯಂಗಾರ್ಯರು ತಮ್ಮ ಕೃತಿಗಳನ್ನು ಸಂಪೂರ್ಣವಾಗಿ ಸಂಸ್ಕೃತದಲ್ಲಿ ರಚಿಸಿದ್ದರು. ತ್ಯಾಗರಾಜರ ಮಿತ್ರರೂ, ಸಮಕಾಲೀನರೂ ಆಗಿದ್ದ ಮುತ್ತುಸ್ವಾಮಿ ದೀಕ್ಷಿತರೂ ಸಹ ತಮ್ಮ ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿದ್ದರು. ಈ ಸನ್ನಿವೇಶಗಳಿಂದ ಪ್ರಭಾವಿತರಾದ ತ್ಯಾಗರಾಜರು ಸಂಸ್ಕೃತದಲ್ಲಿ ಕೃತಿಗಳನ್ನು ಸರಾಗವಾಗಿ ರಚಿಸಿದ್ದಾರೆ. ಇವರಿಗೆ ಸಂಗೀತದ ಸಂಸ್ಕಾರವು ತಾಯಿಯ ಕಡೆಯಿಂದಲೂ ಸಾಹಿತ್ಯದ ಸಂಸ್ಕಾರವು ತಂದೆಯ ಕಡೆಯಿಂದಲೂ ಲಭ್ಯವಾಗಿತ್ತು.

ತ್ಯಾಗರಾಜರು ತಮ್ಮ ಹಲವಾರು ಕೃತಿಗಳಲ್ಲಿ ಸಂಸ್ಕೃತ ಪದಗಳನ್ನು ವಿಶೇಷಾರ್ಥವಿರುವಂತೆ ಉಪಯೋಗಿಸಿದ್ದಾರೆ. ಉದಾ: ಭೈರವಿ ರಾಗದ 'ಶ್ರೀರಘುವರ ಸುಗುಣಾಲಯ' ಎಂಬ ಕೃತಿಯ ಮೊದಲನೆಯ ಚರಣ ಇಲ್ಲಿ 'ಕಮಲಾಹಿತ ನತ ಕಮಲಾಹಿತ ಧರ'



ಎಂಬ ಪದಗಳನ್ನು ಬಳಸಿದ್ದಾರೆ. ಮೊದಲ ನೆಯ 'ಕಮಲಾಹಿತ' ಎಂಬ ಪದವು ಭಗವಂತನಾದ ಲಕ್ಷ್ಮೀಪತಿಗೆ ಅನ್ವಯಿಸುತ್ತದೆ. 'ನತ ಕಮಲಾಹಿತಧರ' ಎಂಬ ಸಮಾಸ ಪದದ ಅರ್ಥ, ಕಮಲಕ್ಕೆ ಅಹಿತನಾದವನು ಎಂದರೆ ಚಂದ್ರನನ್ನು ತಲೆಯಲ್ಲಿ ಧರಿಸಿರುವವನಾದ ಈಶ್ವರನಿಂದ ಆರಾಧಿಸಲ್ಪಟ್ಟ ಶ್ರೀರಾಮ ಎಂದಾಗುತ್ತದೆ. ಇದೇ ರೀತಿ ಕಲ್ಯಾಣಿ ರಾಗದ 'ಪಾಹಿಮಾಂ' ಎಂಬ ಕೃತಿಯ 2ನೆಯ ಚರಣದಲ್ಲಿ ಅತಿಸೊಗಸಾದ 'ಉಪವಲಾರಿ ಮಾಯಾ ವಿಲಾಸಿನಿ' ಎಂಬ ಸಮಾಸಪದವಿದೆ. 'ಯಾದೇವೀ ಸರ್ವ ಭೂತೇಷು ವಿಷ್ಣು ಮಾಯೇತಿ ಶಬ್ದಿತಾ' ಎಂದು ದೇವೀ ಸಪ್ತಶತಿಯಲ್ಲಿ ಹೇಳಿರುವಂತೆ ದೇವಿಯು ವಿಷ್ಣುವಿನ ಮಾಯೆ. ಶ್ರೀಮನ್ನಾರಾಯಣನಿಗೆ ಉಪೇಂದ್ರ ಎಂಬುದು ಇನ್ನೊಂದು ಹೆಸರು. ಇಂದ್ರನಿಗೆ 'ವಲಾರಿ' ಎಂಬುದು ಒಂದು ಹೆಸರು. ಉಪವಲಾರಿ ಎಂದರೆ ಉಪೇಂದ್ರ, ಮೇಲಿನ ಸಮಾಸ ಪದಕ್ಕೆ ಉಪೇಂದ್ರನ ಮಾಯೆಯಾದ ಆದಿಶಕ್ತಿ ಎಂದರ್ಥವಾಗುತ್ತದೆ, ಹಾಗೆಯೇ ರಾಗದ ಕೃತಿಯಲ್ಲಿ 'ವರದಾನವನೀತಾಶ ಪಾಹಿ, ವರದಾನವಮದನಾಶ ಪಾಹಿ.' ದೇವಗಾಂಧಾರಿ ರಾಗದ, ಪಾಲಯ ರಘುವೀರ ಎಂಬ ಕೃತಿಯಲ್ಲಿ 'ತಾರಾಧೀಶವದನರಾಮ' (ಚಂದ್ರವದನ) ತಾರಾಧೀಶದಮನ (ವಾಲೀದಮನ) ಮುಂತಾದ ಯಮಕ ಅನುಪ್ರಾಸಗಳನ್ನು ಸುಂದರವಾಗಿ ಬಳಸಿದ್ದಾರೆ. ಈ ಉದಾಹರಣೆಗಳಿಂದ ತ್ಯಾಗರಾಜರಿಗೆ ಸಂಸ್ಕೃತದಲ್ಲಿ ಅಸಾಧಾರಣ ಪಾಂಡಿತ್ಯವಿತ್ತೆಂದು ಅರಿಯಬಹುದು.

ಗಿರಿರಾಜ ಸುತಾ ತನಯ – (ಬಂಗಾಳ–ಆದಿ)

ತ್ಯಾಗರಾಜರು ಗಣೇಶನ ಸ್ತುತಿಯನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ. ಬಂಗಾಳ ರಾಗವು ಅವರು ಬಳಸಿರುವ ಒಂದು ಹೊಸ ರಾಗ. ಈ ರಾಗದಲ್ಲಿ ಅವರಿಗಿಂತ ಹಿಂದ ಯಾರೂ ಕೃತಿಗಳನ್ನು ರಚಿಸಿದಂತೆ ಕಂಡುಬರುವುದಿಲ್ಲ. ಆದ್ದರಿಂದ ಈ ರಾಗವು ತ್ಯಾಗರಾಜರ ಸ್ವಂತ ಸೃಷ್ಟಿ ಎನ್ನಬಹುದು. ಈ ಕೃತಿಯಲ್ಲಿ ಬಳಸಿರುವ ಸಾಹಿತ್ಯವನ್ನು ನೋಡಿದರೆ ಅವರ ಮೇಲೆ ಇದ್ದ ನಾರಾಯಣ ತೀರ್ಥರ ಪ್ರಭಾವವು ಕಂಡು ಬರುತ್ತದೆ. 'ಕೃಷ್ಣ ಲೀಲಾ ತರಂಗಿಣಿ'ಯ ಪ್ರಾರಂಭದ ಗಣೇಶ ಸ್ತುತಿಯು 'ಗಿರಿರಾಜ ಸುತಾ ಸೂನುಃ' ಎಂದು ಪ್ರಾರಂಭವಾಗುತ್ತದೆ. ಈ ಪದಗಳನ್ನು ತ್ಯಾಗರಾಜರು ತಮ್ಮ ಕೃತಿಯ ಪ್ರಾರಂಭದ ಸಾಹಿತ್ಯಭಾಗವನ್ನಾಗಿ

---

ಬಳಸಿ, "ಸೂನುಃ" ಎನ್ನುವುದರ ಬದಲು 'ತನಯ' ಎಂಬ ಪದವನ್ನು ಬಳಸಿದ್ದಾರೆ. ಇದಲ್ಲದೆ ತ್ಯಾಗರಾಜರು ತಮ್ಮ ತಾತ ಗಿರಿರಾಜ ಬ್ರಹ್ಮ, ತಂದೆ ರಾಮ ಬ್ರಹ್ಮರನ್ನು ಸ್ಮರಿಸಿದಂತೆ ತೋರುತ್ತದೆ.

ಗಿರಿರಾಜ ಸುತೆಯಾದ ಪಾರ್ವತೀ ಪುತ್ರನೇ, ಗಣಪತಿಯೇ, ಶಂಕರಾಗಮವಾರಿಧಿಯ ಚಂದ್ರನೇ. ಫಣಿರಾಜನನ್ನು ಕಂಕಣವಾಗಿ ಉಳ್ಳವನೇ, ವಿಘ್ನಗಳನ್ನು ನಿವಾರಿಸಿ ರಕ್ಷಿಸೋ ಎಂದು ಈ ಕೃತಿಯಲ್ಲಿ ಸ್ತುತಿಸಿದ್ದಾರೆ.

ಶ್ರೀನಾರದ ( ಕಾನಡ – ರೂಪಕ )

ಇದು ತ್ಯಾಗರಾಜರ ಒಂದು ಸಂಪೂರ್ಣ ಸಂಸ್ಕೃತ ಕೃತಿ. ವಿಶೇಷ ಗುರು ಪ್ರಶಂಸೆಯ ಕೃತಿ. ನಾರದರನ್ನು 'ವೇದಜನಿತ ವರ ವೀಣಾ ವಾದನ ತತ್ತ್ವಜ್ಞ' ಎಂದು ಸ್ತುತಿಸಿದ್ದಾರೆ. ವೀಣೆಯು ಬಹು ಪುರಾತನ ಕಾಲದಿಂದ ಬಳಕೆಯಲ್ಲಿರುವ ಒಂದು ಪ್ರಮುಖ ವಾದ್ಯ, ಇದು ವೇದ ಜನಿತವಾದುದು ಎಂದು ಪುರಾಣಗಳು ಸಾರುತ್ತಿವೆ. ವೀಣಾವಾದನ ತತ್ತ್ವವನ್ನು ಸಂಪೂರ್ಣವಾಗಿ ಅರಿತವರಾದ ನಾರದ ಮಹರ್ಷಿಯು ಸನ್ಯಾಸಿ ವೇಷದಲ್ಲಿ ತ್ಯಾಗರಾಜರಲ್ಲಿಗೆ ಬಂದು ಸಂಗೀತ ಶಾಸ್ತ್ರ ರಹಸ್ಯವನ್ನೆಲ್ಲಾ ಒಳಗೊಂಡ 'ಸ್ವರಾರ್ಣವ' ಎಂಬ ಗ್ರಂಥವನ್ನು ಅನುಗ್ರಹಿಸಿದರು ಎಂಬುದಾಗಿ ತ್ಯಾಗರಾಜರ ಜೀವನ ಚರಿತೆಯಿಂದ ತಿಳಿದು ಬರುತ್ತದೆ. ನೂತನ ರಾಗಗಳನ್ನು ಸೃಷ್ಟಿಸುವಾಗ, ಕೃತಿ ರಚನೆ ಮಾಡುವಾಗ ಸಮಸ್ಯೆಗಳೇನಾದರೂ ಉಂಟಾದರೆ ಅವುಗಳ ಪರಿಹಾರಕ್ಕಾಗಿ ತ್ಯಾಗರಾಜರು ಈ ಗ್ರಂಥವನ್ನು ಪರಾಮರ್ಶಿಸುತ್ತಿದ್ದರು. 'ಶ್ರೀನಾರದ ನಾದ ಸರಸೀರುಹಭೃಂಗ ಶುಭಾಂಗ' ಎಂಬ ಸಂಸ್ಕೃತ ಸಾಹಿತ್ಯವುಳ್ಳ ಈ ಕೃತಿಯನ್ನು ರಚಿಸಿ ತ್ಯಾಗರಾಜರು ತಮ್ಮ ಕೃತಜ್ಞತಾ ಪೂರ್ವಕವಾದ ಪ್ರಣಾಮಗಳನ್ನು ನಾರದರಿಗೆ ಸಲ್ಲಿಸಿದ್ದಾರೆ.

ಶಂಭೋ ಮಹಾದೇವ ( ಪಂತುವರಾಳಿ – ರೂಪಕ )

ತ್ಯಾಗರಾಜರು ರಚಿಸಿರುವ ಕೋವೂರು ಪಂಚರತ್ನ ಕೃತಿಗಳಲ್ಲಿ ಇದೊಂದು ಸಂಸ್ಕೃತ ಕೃತಿ. ಕೋವೂರಿಗೆ 'ಗೋಪುರ' ಎಂದು ಇನ್ನೊಂದು ಹೆಸರು. ಇದು ಕ್ಷೇತ್ರ ಮುದ್ರೆಯನ್ನು ಸೂಚಿಸುತ್ತದೆ. ಶ್ರೀ ಶಂಕರಾಚಾರ್ಯರು ರಚಿಸಿರುವ ಶಿವಾನಂದಲಹರಿ ಎಂಬ ಶತಕದ 65ನೆಯ ಶ್ಲೋಕದಲ್ಲಿ ಈಶ್ವರನಿಗೆ ಕೈಲಾಸದಲ್ಲಿ ನಿತ್ಯವೂ ಪೂಜಾ ಸಮಯದಲ್ಲಿ ನೀರಾಜನ ಸಮರ್ಪಣವು ಹೇಗೆ ಆಗುತ್ತಿತ್ತು ಎಂಬುದರ ವಿವರಣೆಯಿದೆ. ದೇವತೆಗಳು ನಮಸ್ಕರಿಸುತ್ತಿದ್ದಾಗ ಅವರ ಕಿರೀಟಗಳಲ್ಲಿದ್ದ ನವರತ್ನಗಳ ಕಾಂತಿಯೇ ಈಶ್ವರನಿಗೆ ನೀರಾಜನ ಸೇವೆಯಾದಂತೆ ಭಾಸವಾಗುತ್ತಿದ್ದಿತಂತೆ. ಇದೇ ಅಭಿಪ್ರಾಯವನ್ನು ಗೋಪುರವಾಸನಾದ ಸುಂದರೇಶನನ್ನು ಸ್ತುತಿಸುತ್ತಾ "ಸುರ ಬೃಂದ ಕಿರೀಟ ಮಣಿವರ ನೀರಾಜಿತ ಪದ ಗೋಪುರವಾಸ" ಎಂಬ ಸಾಹಿತ್ಯದಲ್ಲಿ ವ್ಯಕ್ತಗೊಳಿಸಿದ್ದಾರೆ.

ಮಹಿತ ಪ್ರವೃದ್ಧ ಶ್ರೀಮತಿ – ( ಕಾಂಭೋಜಿ – ಛಾಪು )

ಇದು ತ್ಯಾಗರಾಜರು ಶ್ರೀತಪಸ್ತೀರ್ಥ ದೇವೀ ಪ್ರವೃದ್ಧ ಶ್ರೀಮತಿಯನ್ನು ಸ್ತುತಿಸಿರುವ ಸಂಸ್ಕೃತ ಕೃತಿ. ಇದರಲ್ಲಿ ಷಣ್ಮುಖ ಗಣಪತಿಗಳ ಜನನಿಯೂ ಕಾಮಿತಾರ್ಥಫಲ ದಾಯಕಿಯೂ, ರಾಜಶೇಖರನ ಆತ್ಮಭೂ ವಿರಾಜಳೂ, ಸಿಂಹವಾಹಿನಿಯೂ ಆದ ಪ್ರವೃದ್ಧ ಶ್ರೀಮತಿಯನ್ನು ತನಗೆ ಆ ದೇವಿಯ ಚರಣ ಭಕ್ತಿಯನ್ನು ಅನುಗ್ರಹಿಸಿ ಕಾಪಾಡಬೇಕೆಂದು ಪ್ರಾರ್ಥಿಸಿದ್ದಾರೆ

ಶ್ರೀ ಜನಕ ತನಯೇ – ( ಕಲಕಂಠಿ – ಆದಿ )

ಇದು ಮಹಾತ್ಮೆಯನ್ನು ತಿಳಿಸುವ ತ್ಯಾಗರಾಜರ ಒಂದು ಸಂಸ್ಕೃತ ಕೃತಿ. ರಘುರಾಮನ ಸತಿಯೂ, ಜನಕ ಸುತೆಯೂ, ಭಕ್ತರ ಹೃದಯ ನಿವಾಸಿಯೂ, ನವಮಣಿ ಭೂಷಣೆಯೂ ಆದ ಸೀತಾಮಾತೆಯನ್ನು ಸ್ತುತಿಸಿದ್ದಾರೆ.

ದೇವಿ ತವಪದ ಭಕ್ತಿಂ ವೈದೇಹಿ – ( ಶಹಾನ – ಆದಿ )

ಇದು ತ್ಯಾಗರಾಜರು ರಚಿಸಿರುವ ಸೀತಾಮಾತೆಯ ಸ್ತುತಿಯಾದ ಒಂದು ಸಂಸ್ಕೃತ ಕೃತಿ. ಪರಮಪಾವನಿಯೂ, ಐಹಿಕ ಮತ್ತು ಆಮುಷ್ಮಿಕ ಫಲಗಳನ್ನು ಕೊಡುವವಳೂ, ಬ್ರಹ್ಮ ಮತ್ತು ಮನ್ಮಥನ ತಾಯಿಯೂ, ಕ್ಷೀರಸಾಗರನ ಪುತ್ರಿಯೂ, ಶ್ರೀರಾಮನ ಮಡದಿಯೂ, ಅಖಿಲಾಂಡ ರೂಪಿಣಿಯೂ, ಶರಣಾಗತ ರಕ್ಷಕಿಯೂ ಆದ ಸೀತಾಮಾತೆಯನ್ನು, ತನಗೆ ಅಖಂಡ ಭಕ್ತಿಯನ್ನು ಅನುಗ್ರಹಿಸಿ ಕಾಪಾಡಬೇಕೆಂದು ಪ್ರಾರ್ಥಿಸಿದ್ದಾರೆ.

ಪಾಹಿ ರಾಮದೂತ– (ವಸಂತರಾಳಿ-ರೂಪಕ)

ಇದು ತ್ಯಾಗರಾಜರು ಆಂಜನೇಯನನ್ನು ಕುರಿತು ರಚಿಸಿರುವ ಒಂದು ಸಂಪೂರ್ಣ ಸಂಸ್ಕೃತ ಕೃತಿ. ಸಮುದ್ರೋಲ್ಲಂಘನವನ್ನು ಮಾಡಿ, ಅಕ್ಷ ಕುಮಾರನನ್ನು ಕೊಂದ, ಶ್ರೀರಾಮನ ಪಾದಗಳನ್ನು ಕೈಗಳಲ್ಲಿ ಹಿಡಿದಿರುವ, ಕಲಿಯುಗದ ಪಾಪಗಳನ್ನು ನಿವಾರಿಸುವ, ಪಾರಿಜಾತತರು ನಿವಾಸಿಯಾದ, ಪತಿತೋದ್ಧಾರಕನೂ, ವೇದ ಶಾಸ್ತ್ರ ನಿಪುಣನೂ, ಕರುಣಾರಸಪೂರ್ಣನೂ, ಪರಮ ಭಾಗವತನೂ ಆದ ಆಂಜನೇಯನನ್ನು, ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದ್ದಾರೆ. ಇದೊಂದು ಭಕ್ತ ಮಹಾತ್ಮ್ಯವನ್ನು ವಸ್ತುವಾಗಿ ಉಳ್ಳ ಕೃತಿ.

ಜಗದಾನಂದಕಾರಕ – ( ನಾಟ – ಆದಿ )

ಘನರಾಗ ಪಂಚರತ್ನ ಕೃತಿಗಳಲ್ಲಿ ಮೊದಲನೆಯದಾದ ಈ ಪಂಚರತ್ನವನ್ನು ತ್ಯಾಗರಾಜರು ಸಂಪೂರ್ಣವಾಗಿ ಸಂಸ್ಕೃತದಲ್ಲಿ ರಚಿಸಿದ್ದಾರೆ. ಇದೊಂದು ಸ್ತೋತ್ರ ಸಂಗೀತ ಕಾವ್ಯ. ಈ ಕೃತಿಯ ಮೂಲಕ ತ್ಯಾಗರಾಜರು ಪರಮಾತ್ಮನಾದ ಶ್ರೀರಾಮನನ್ನು 108 ನಾಮಗಳಿಂದ ಪೂಜಿಸಿದ್ದಾರೆ. ಇದನ್ನು ಪದ ವಿಭಾಗಮಾಡಿ ಮೊದಲು ಓಂ ಮತ್ತು ಕೊನೆಯಲ್ಲಿ ನಮಃ ಎಂಬುದಾಗಿ ಸೇರಿಸಿಕೊಂಡರೆ ಓಂ ಜಗದಾನಂದ ಕಾರಕಾಯ ನಮಃ, ಓಂ ಜಯ ಜಾನಕೀ ಪ್ರಾಣನಾಯಕಾಯ ನಮಃ, ಓಂ ಗಗನಾಧಿಪ ಸತ್ಕುಲಜಾಯ ನಮಃ– ಇತ್ಯಾದಿ ಅಷ್ಟೋತ್ತರ ಶತನಾಮವಾಗುತ್ತದೆ. ಆದ್ದರಿಂದ ಇದನ್ನು ತ್ಯಾಗರಾಜ ಕೃತ ರಾಮಾಷ್ಟೋತ್ತರ ಕೃತಿಯೆಂದುರೆಯುವುದು ವಾಡಿಕೆ. ಇದು 10 ಚರಣಗಳಿರುವ ಕೃತಿ. ನಾಟರಾಗವು ಅನೇಕ ರಸಗಳನ್ನು ಪ್ರತಿಪಾದಿಸಿದರೂ ಅದು ವೀರರಸ

ಪ್ರಧಾನವಾದ ರಾಗ, ಆದ್ದರಿಂದ ಈ ಕೃತಿಯಲ್ಲಿರುವ ನಾಮಗಳೆಲ್ಲವೂ ಹೆಚ್ಚಾಗಿ ರಾಮನ ಶೌರ್ಯ ಪ್ರತಾಪಗಳನ್ನು ಹೇಳುತ್ತವೆ. ಉದಾ: ಅನಿಮಿಷವೈರಿವಾರಿದ ಸಮೀರಣ, ಅವಗುಣ ಅಸುರಗಣ ಮದಹರಣ. ಖರವಿರಾಧ ರಾವಣ ವಿರಾವಣ, ಅಭಿಮದಹರಣ, ನಾಗ ಗಜ ನೃಸಿಂಹ – ಇತ್ಯಾದಿ.

ಸಾಮಜ ವರಗಮನ – (ಹಿಂದೋಳ–ಆದಿ)

ಈ ಸಂಸ್ಕೃತ ಕೃತಿಯಲ್ಲಿ ತ್ಯಾಗರಾಜರು ಶ್ರೀಕೃಷ್ಣ ಪರಮಾತ್ಮನನ್ನು 'ಮುರಳೀವಾದನ ವಿನೋದ, ಸಾಮ ನಿಗಮಜ ಸುಧಾಮಯ ಗಾನ ವಿಚಕ್ಷಣ' ಎಂದು ಹೇಳಿರುವುದು ಗಮನಾರ್ಹವಾಗಿದೆ. ಸಂಗೀತದ ಮೂಲ ಸಾಮವೇದ ಎಂಬುದನ್ನು ಸಿದ್ಧಾಂತ ಮಾಡಿದ್ದಾರೆ. ಶ್ರೀಕೃಷ್ಣನನ್ನು 'ಸಪ್ತ ಸ್ವರನಾದಾಚಲ ದೀಪ' ಅಂದರೆ ಪ್ರಣವದಿಂದ ಹುಟ್ಟಿದ ಸಪ್ತ ಸ್ವರಗಳ ನಾದ ಪರ್ವತದ ತುದಿಯಲ್ಲಿರುವ ದೀಪ ಎಂದು ವರ್ಣಿಸಿರುವುದು ಅರ್ಥಗರ್ಭಿತವಾಗಿದೆ. ಈ ಅಭಿಪ್ರಾಯವನ್ನು ತ್ಯಾಗರಾಜರು ಬಹುಶಃ ಉಪನಿಷತ್ ಬ್ರಹ್ಮೇಂದ್ರ ವಿರಚಿತ ಲಲಿತರಾಗದ ದಿವ್ಯನಾಮ ಸಂಕೀರ್ತನೆ 'ಸಂವಿದ್ರೂಪ ನಾದ ಪ್ರದೀಪ' ಎಂಬುದರಿಂದ ಪಡೆದಿರಬಹುದು. ಅಲ್ಲದೆ ಸಪ್ತ ಸ್ವರಗಳ ಆರೋಹಣ ಸ್ವರಗಳನ್ನು ತಿರುಪತಿ ಕ್ಷೇತ್ರದಲ್ಲಿರುವ 7 ಬೆಟ್ಟಗಳಿಗೂ, ದೀಪ ಅಥವಾ ಜ್ಯೋತಿಯನ್ನು ಬೆಟ್ಟದ ಮೇಲಿರುವ ಪರಮಾತ್ಮನಿಗೂ ಹೋಲಿಸಿರುವಂತೆ ತೋರುತ್ತದೆ. ಇದು ಸಂಗೀತಕ್ಕೆ ಸಂಬಂಧಿಸಿದಂತೆ ಭಗವತ್ ಸ್ವರೂಪವನ್ನು ವಿವರಿಸುವ ಕೃತಿ.

ನಾದತನುಮನಿಶಂ ಶಂಕರಂ ನಮಾಮಿ –
(ಚಿತ್ತರಂಜನೀ – ಆದಿ)

ಇದು ಸಂಗೀತಕ್ಕೆ ಸಂಬಂಧಿಸಿದಂತೆ ಭಗವತ್ಸ್ವರೂಪವನ್ನು ವಿವರಿಸುವ ಮತ್ತೊಂದು ಸಂಸ್ಕೃತ ಕೃತಿ. ತ್ಯಾಗರಾಜರಿಗೆ ಸಂಗೀತ ಶಾಸ್ತ್ರ ಗ್ರಂಥಗಳ ಆಳವಾದ ಪರಿಚಯವಿತ್ತು ಎಂಬುದನ್ನು ಈ ಕೃತಿಯಿಂದ ಅರಿಯಬಹುದು. ಕರ್ನಾಟಕ ಸಂಗೀತದ ವರ್ಣಮಾಲೆಯಲ್ಲಿರುವ ಸರಿಗಮಪದನಿ ಎಂಬ ಸಪ್ತ ಸ್ವರಗಳು ಹೇಗೆ ಉದ್ಭವಿಸಿದುವು ಎಂಬುದನ್ನು ಈ ಕೃತಿಯಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಈಶ್ವರನಿಗೆ 5 ಮುಖಗಳು. ಅವುಗಳಿಗೆ ಕ್ರಮವಾಗಿ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಎಂದು ಹೆಸರು. ಪ್ರಕೃತಿಮಾತೆಯಾದ ಪಾರ್ವತಿಯು ಈಶ್ವರನ ಅರ್ಧಾಂಗಿ. ಈಶ್ವರನ ಐದು ಮುಖಗಳಿಂದ ಕ್ರಮವಾಗಿ 'ರಿಗಮದನಿ' ಎಂಬ ವಿಕೃತಿ ಸ್ವರಗಳೂ, ಪಾರ್ವತಿಯ ಮುಖದಿಂದ ಪ್ರಕೃತಿ ಸ್ವರಗಳಾದ ಸ ಮತ್ತು ಪ ಎಂಬ ಎರಡು ಸ್ವರಗಳು ಉದ್ಭವಿಸಿದುವು ಎಂಬುದಕ್ಕೆ ವೇದದ ಆಧಾರ ಇದೆ. ಸಂಗೀತಕ್ಕೆ ಮೂಲವು ಸಾಮವೇದ (ಸಾಮ ವೇದಾದಿದಂ ಗೀತಂ ಸಂಜಗ್ರಾಹ ಪಿತಾಮಹಃ) ಹೀಗೆ ಅರ್ಧನಾರೀಶ್ವರ ತತ್ತ್ವದಿಂದ ಸಂಗೀತದ ಸಪ್ತ ಸ್ವರಗಳು ಉತ್ಪತ್ತಿಯಾದುವು. ಸಂಗೀತದಲ್ಲೀ ಅನುಮಂದ್ರ. ಮಂದ್ರ, ಮಧ್ಯ, ತಾರ ಮತ್ತು ಅತಿತಾರ ಎಂಬ ಐದು ಸ್ಥಾಯಿಗಳಿವೆ. ಈಶ್ವರನ ಐದು ಮುಖಗಳಿಂದಲೂ ಕ್ರಮವಾಗಿ ಐದು ಸ್ಥಾಯಿಗಳಲ್ಲಿ ಸಪ್ತ ಸ್ವರಗಳೂ ಉತ್ಪತ್ತಿಯಾಯಿತೆಂಬ ಅಭಿಪ್ರಾಯವನ್ನು ಈ ಕೃತಿಯಲ್ಲಿ ಹೇಳಿದ್ದಾರೆ. ಈ ಕೃತಿಯ ಪ್ರಾರಂಭದ ಸಾಹಿತ್ಯವಾದ 'ನಾದತನು' ಎಂಬುದನ್ನು ಶಾರ್ಙ್ಗದೇವನ 'ಸಂಗೀತ ರತ್ನಾಕರ'ದ ಮೊದಲನೆಯ ಮಂಗಳ ಶ್ಲೋಕವಾದ 'ವಂದೇ ನಾದತನುಂ' ಎಂಬ ಶ್ಲೋಕದ ಸಾಹಿತ್ಯವನ್ನು ಬಳಸಿರುವುದು ಗಮನಾರ್ಹವಾಗಿದೆ. ಚಿತ್ತರಂಜನೀ ರಾಗವು ತ್ಯಾಗರಾಜರ ಸ್ವಂತ ಸೃಷ್ಟಿ.

**ಚೂರ್ಣಿಕೆ:** ಚೂರ್ಣಿಕೆ ಎಂಬುದು ಒಂದು ಬಗೆಯ ಗೇಯ ಪ್ರಕಾರ. ಸಾಮಾನ್ಯವಾಗಿ ಇದು ಸಂಸ್ಕೃತ ಭಾಷೆಯಲ್ಲಿರುತ್ತದೆ. ಇದರಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂಬ ಭಾಗಗಳಿರುವುದಿಲ್ಲ. ತಾಳದ ನಿರ್ಬಂಧವೂ ಇಲ್ಲ. ಇದು ದೇವರ ಸ್ತೋತ್ರ ರೂಪವಾಗಿದ್ದು ದೊಡ್ಡ ದೊಡ್ಡ ಸಮಾಸ ಪದಗಳಿಂದ ಕೂಡಿದ ಗದ್ಯ ಪದ್ಯ. ಇದನ್ನು ಸಾಮಾನ್ಯವಾಗಿ ಆರಭಿ ಅಥವಾ ದೇವಗಾಂಧಾರಿ ರಾಗದಲ್ಲಿ ಶ್ಲೋಕದ ರೀತಿಯಲ್ಲಿ ಹಾಡುವುದು ರೂಢಿ. 'ಜಯ ಜಯ ಸಕಲ ನಿಗಮಾಗಮ ಕುಶಲ ಕಿನ್ನರ' ಎಂಬ ಚೂರ್ಣಿಕೆಯು ತ್ಯಾಗರಾಜರು ರಚಿಸಿರುವ 'ಪ್ರಹ್ಲಾದ ಭಕ್ತಿ ವಿಜಯ' ಎಂಬ ಗೇಯ ನಾಟಕದ 3 ನೆಯ ಅಂಕದಲ್ಲಿ ಬರುತ್ತದೆ. ನಾರದ ಮುನಿಯು ಭಕ್ತಶಿರೋಮಣಿಯಾದ ಪ್ರಹ್ಲಾದನಿಗೆ ವೈಕುಂಠದ ಮಹಿಮೆಯನ್ನು ಇದರಲ್ಲಿ ವರ್ಣಿಸಿದ್ದಾರೆ.

(32 ನೇ ಪುಟ ನೋಡಿ)

ಅಂಜನಾನಂದನಂ ವೀರಂ
ಜಾನಕೀ ಶೋಕನಾಶನಮ್ ।
ಕಪೀಶಂ ಅಕ್ಷಹಂತಾರಂ
ವಂದೇ ಲಂಕಾಭಯಂಕರಂ ॥

ಅನಿಮಿಷೀಕೃತಮಾರ್ತಾಂಡಂ
ಗೋಷ್ಪದೀಕೃತಸಾಗರಮ್ ।
ತೃಣೀಕೃತ ದಶಗ್ರೀವಂ
ಆಂಜನೇಯಂ ನಮಾಮ್ಯಹಂ ॥

ಮನೋಜವಂ ಮಾರುತ ತುಲ್ಯವೇಗಂ
ಜಿತೇಂದ್ರಿಯಂ ಬುದ್ಧಿ ಮತಾಂ ವರಿಷ್ಠಂ
ವಾತಾತ್ಮಜಂ ವಾನರ ಯೋಧ ಮುಖ್ಯಂ
ಶ್ರೀರಾಮ ದೂತಂ ಶಿರಸಾ ನಮಾಮಿ

ವಾಲ್ಮೀಕಿ ರಾಮಾಯಣದಲ್ಲಿ ಆಂಜನೇಯನ ಪಾತ್ರ ಅತ್ಯದ್ಭುತವಾದುದು. ಕಥಾನಾಯಕರಾದ ಸೀತಾರಾಮರ ಪಾತ್ರಗಳಿಗಿಂತ ಮಹೋನ್ನತವಾದುದು. ಅವರ ಕಾರ್ಯನಿರ್ವಾಹಕ್ಕೆ, ವ್ಯಕ್ತಿತ್ವ ವಿಕಾಸಕ್ಕೆ ಮೂಲಭೂತವಾದ ಪಾತ್ರವಿದು. ಕಾವ್ಯದ ಆದಿಯಲ್ಲಿಯೇ ವಾಲ್ಮೀಕಿಋಷಿಗಳು ತಮ್ಮ ಕಾವ್ಯದ ವಸ್ತುವನ್ನು ಖಚಿತ ಪಡಿಸಿದ್ದಾರೆ: ಶ್ರೇಷ್ಠವಾದ ರಾಮಕಥೆ ಸೀತಾದೇವಿಯ ಮಹತ್ ಮತ್ತು ಪೌಲಸ್ತ್ಯವಧೆ–ಇವು ಮೂರು ರಾಮಾಯಣದ ವಸ್ತುಗಳು. ಇವು ಮೂರು ಆಂಜನೇಯನ ಪಾತ್ರವಿಲ್ಲದಿದ್ದರೆ ಸಾಧ್ಯವಾಗುತ್ತಿರಲಿಲ್ಲ. ಮತ್ತಾವ ಪಾತ್ರವಿಲ್ಲದಿದ್ದರೂ ಕಥೆಯು ಒಂದು ರೀತಿಯಲ್ಲಿ ಬೆಳೆಯಬಹುದಾಗಿತ್ತು. ಅವು ಸಾಧ್ಯವಾದುದು ಹನುಮಂತನ ಪೌರುಷ, ವಿಕ್ರಮ ಮತ್ತು ಬುದ್ಧಿ ಇವುಗಳ ತ್ರಿವೇಣಿ ಸಂಗಮದಿಂದ

ರಾಮಾಯಣದ ಮೊದಲು ಮೂರು ಕಾಂಡಗಳು ಉದ್ದಿಷ್ಟಕಾರ್ಯಸಾಧನೆಗೆ ಉಪೋದ್ಘಾತ ಅಥವಾ ಪೂರ್ವರಂಗಮಾತ್ರ. ಅವು ಕಾರ್ಯರೂಪಕ್ಕೆ ಬಂದುದು ಹನುಮಂತನು ಪ್ರವೇಶಿಸಿದ ಕಿಷ್ಕಿಂಧಾಕಾಂಡದಿಂದ.

ಹನುಮಂತನ ಜನನ ಮತ್ತು ಬಾಲ್ಯ ವಿಷಯಗಳು ಪರಿಚಯವಾಗುವುದು ಕಿಷ್ಕಿಂಧಾಕಾಂಡದ ಕೊನೆಯಭಾಗದಲ್ಲಿ–ಜಾಂಬವಂತನಿಂದ. ಸಂಪಾತಿಯಿಂದ ಸೀತಾದೇವಿಯು ಲಂಕಾಪಟ್ಟಣದಲ್ಲಿ ಬಂಧಿತಳಾಗಿದ್ದಾಳೆಂಬ ವಿಷಯ ತಿಳಿದುಬರುತ್ತದೆ. ಅಲ್ಲಿಗೆ ಹೋಗಬೇಕಾದರೆ ಮಧ್ಯೆ ಇರುವ ನೂರು ಯೋಜನ ಅಗಲದ ಸಮುದ್ರವನ್ನು ಲಂಘಿಸುವ ಶಕ್ತಿ ಯಾರಿಗುಂಟು ಎಂದು ವಾನರಾದಿಗಳು ವಿಚಾರಮಾಡುತ್ತ ಅಲ್ಲಿರುವವರೆಲ್ಲ ತಮ್ಮ ಶಕ್ತಿಯನ್ನು ಸೂಚಿಸುತ್ತಾರೆ. ಅವರಲ್ಲಾರಿಗೂ ಆ ಶಕ್ತಿ ಇರುವುದಿಲ್ಲ. ಮುಂದೇನು ಗತಿ ಎಂದು ಚಿಂತಿಸುತ್ತಿದ್ದಾಗ ಯಾವ ಮಾತನ್ನೂ ಆಡದೆ ಏಕಾಂತವಾಗಿ ಕುಳಿತಿದ್ದ ಹನುಮಂತನನ್ನು ಪ್ರಚೋದಿಸಲು ಅವನನ್ನು ಕುರಿತು ಜಾಂಬವಂತನು ಹೀಗೆನ್ನುವನು. 'ಓ! ಹನುಮಂತ, ಈ ವಾನರಸೇನೆಯಲ್ಲಿ ಅಗ್ರಗಣ್ಯನಾದವನು ನೀನು. ಸರ್ವಶಾಸ್ತ್ರಗಳಲ್ಲಿ ವಿಶಾರದನಾಗಿದ್ದೀಯೆ. ಏಕಾಂತವಾಗಿ ಕುಳಿತಿರುವೆಯಲ್ಲ. ತೇಜೋಬಲಗಳಲ್ಲಿ ನೀನು ಕಪಿರಾಜನಾದ ಸುಗ್ರೀವನಿಗೆ ಸಮಾನವಾದವನು. ಅಷ್ಟೇ ಅಲ್ಲ; ರಾಮಲಕ್ಷ್ಮಣರಿಗೂ ಸಮಾನನಾಗಿದ್ದೀಯೆ. ಮಹಾಪರಾಕ್ರಮಿಯಾದ ಪಕ್ಷಿರಾಜನಾದ ವೈನತೇಯನಿಗೂ ಸಮನಾದವನು. ನಿನ್ನ ಬಲ, ನಿನ್ನ ಬುದ್ಧಿ, ನಿನ್ನ ತೇಜಸ್ಸು, ನಿನ್ನ ಧೈರ್ಯ ಈ ಪ್ರಪಂಚದಲ್ಲಿ ಸರ್ವಾಧಿಕವಾದುದು. ನಿನ್ನ ಮಹಿಮೆಯು ನಿನಗೇ ತಿಳಿಯದಲ್ಲ ಆಂಜನೇಯ, ಹಿಂದೆ ಪುಂಜಿಕಸ್ಥಲೆಯೆಂಬ ಒಬ್ಬ ಅಪ್ಸರೆಯಿದ್ದಳು. ಅವಳು ಶಾಪದಿಂದ ವಾನರ ಜನ್ಮವನ್ನೆತ್ತಿದಳು. ಅವಳಿಗೆ ಅಂಜನೆಯೆಂಬ ಹೆಸರಾಯಿತು. ಅವಳು ಕೇಸರಿಯೆಂಬ ವಾನರನಿಗೆ ಭಾರ್ಯೆಯಾದಳು. ಬಹುಸುಂದರಿಯಾದ ಅವಳು ಕಾಮರೂಪಳಾದುದರಿಂದ ಒಂದುದಿನ ಬಹುಸುಂದರವಾದ ಮನುಷ್ಯರೂಪವನ್ನು ತಾಳಿ ಪರ್ವತ ಶಿಖರದಲ್ಲಿ



# ವಾಲ್ಮೀಕಿಯ ಆಂಜನೇಯ

ಸಂಚರಿಸುತ್ತಿದ್ದಳು. ಆಗ ಅಲ್ಲಿ ಸಂಚರಿಸುತ್ತಿದ್ದ ವಾಯುದೇವನು ಅವಳ ಸೌಂದರ್ಯದಿಂದ ಮೋಹಿತನಾಗಿ ಅವಳನ್ನು ಆಲಿಂಗಿಸಿಕೊಂಡನು. ಪತಿವ್ರತಾಧರ್ಮಕ್ಕೆ ಭಂಗಬರುವುದೆಂದು ಹೆದರಿ ಪ್ರತಿಭಟಿಸಿದ ಅಂಜನಾ ದೇವಿಗೆ ಮಾರುತನು ತನ್ನ ಪರಿಚಯವನ್ನು ತಿಳಿಸಿ ಅವಳಿಗೆ ವೀರ್ಯಶಾಲಿಯೂ ಬುದ್ಧಿ ಸಂಪನ್ನನೂ ಆದ ಪುತ್ರನು ಜನಿಸುವನೆಂದು ತಿಳಿಸಿದಮೇಲೆ ಅವಳು ಸಂಗಕ್ಕೆ ಒಪ್ಪಿ ಪಕ್ಕದ ಗುಹೆಯಲ್ಲಿ ಕಪಿ ಶ್ರೇಷ್ಠನಾದ ನಿನ್ನನ್ನು ಪಡೆದಳು. ಆಗ ಸೂರ್ಯನು ಉದಿಸಿ ಮೇಲಕ್ಕೆ ಬಂದಿದ್ದನು. ಬಾಲಕನಾಗಿದ್ದ ನೀನು ಸೂರ್ಯಬಿಂಬವನ್ನು ನೋಡಿ ಅದು ಒಂದು ಹಣ್ಣೆಂದು ಭ್ರಮಿಸಿ ಅದನ್ನು ಹಿಡಿಯುವುದಕ್ಕೆ ಆಕಾಶಕ್ಕೆ ಹಾರಿ ಹೋದೆ. ಅದನ್ನು ನೋಡಿ ಕೋಪಗೊಂಡ ದೇವೇಂದ್ರನು ನಿನ್ನ ಮೇಲೆ ವಜ್ರಾಯುಧವನ್ನು ಬೀಸಿದನು. ಆಗ ಪರ್ವತದಮೇಲೆ ನೀನು ಬೀಳಲು ನಿನ್ನ ಹನು (ದವಡೆ) ವಿಗೆ ಪೆಟ್ಟು ಬಿದ್ದು ಊದಿಕೊಂಡಿತು. ಅಂದಿನಿಂದ ನಿನಗೆ ಹನುಮಂತನೆಂಬ ಹೆಸರಾಯಿತು. ಇಂದ್ರನ ಈ ಕಾರ್ಯದಿಂದ ನಿನ್ನ ತಂದೆಯಾದ ವಾಯುದೇವನಿಗೆ ಕೋಪ ಬಂದಿತು. ಮೂರುಲೋಕಗಳಲ್ಲಿಯೂ ಅವನು ಎಲ್ಲಿಯೂ ಬೀಸಲಿಲ್ಲ. ದೇವತೆಗಳು ಭಯಗ್ರಸ್ತರಾಗಿ ವಾಯುವನ್ನೇ ಮೊರೆಹೊಕ್ಕರು. ಅವನ ತೃಪ್ತಿಗಾಗಿ ಬ್ರಹ್ಮನು ಈ ಮಗುವಿಗೆ ಯಾವ ಆಯುಧದಿಂದಲೂ ಮೃತ್ಯುವುಂಟಾಗದಿರಲಿ ಎಂದು ಹರಸಿದನು. ದೇವೇಂದ್ರನು ನಿನಗೆ ಸ್ವೇಚ್ಛಾ ಮರಣವುಂಟಾಗಲಿ ಎಂದು ಆಶೀರ್ವದಿಸಿದನು. ನೀನು ಕೇಸರಿಗೆ ಕ್ಷೇತ್ರಜನೂ ವಾಯುವಿಗೆ ಔರಸ ಪುತ್ರನೂ ಆಗಿದ್ದೀಯೆ. ಪರಾಕ್ರಮಿಯಾದ ನಿನ್ನ ತೇಜಸ್ಸು ವಾಯುದೇವನಿಗೆ ಸಮಾನವಾದುದು. ಇತರರಿಗೆ ಶಕ್ಯವಲ್ಲದ ಕಾರ್ಯಶಕ್ತಿ ನಿನ್ನಲ್ಲಿದೆ. ನೀನು ಎದ್ದು ನಮ್ಮನ್ನೆಲ್ಲ ಉದ್ಧಾರಮಾಡು' ಎಂದು ಕೇಳಿಕೊಂಡನು. ಜಾಂಬವಂತನ ಈ ಮಾತುಗಳಿಂದ ಹನುಮಂತ

ಡಾ॥ ಎನ್. ಅನಂತರಂಗಾಚಾರ್

ನಿಗೆ ತನ್ನ ಶಕ್ತಿಯ ಅರಿವಾಯಿತು. ಅವನು ತನ್ನ ದೇಹವನ್ನು ಬೆಳೆಸತೊಡಗಿದನು. ಅವನ ತೇಜಸ್ಸು ವೃದ್ಧಿಯಾಯಿತು. ಅವನು ವಿಶೇಷವಾಗಿ ವಿಜೃಂಭಿಸಿ ಲಂಘನಕಾರ್ಯೋನ್ಮುಖನಾದನು.

ಈ ಮಹಾನುಭಾವನ ಪರಿಚಯ ರಾಮಾಯಣದಲ್ಲಿ ನಮಗೆ ಮೊದಲು ಆಗುವುದು ಕಿಷ್ಕಿಂಧಾಕಾಂಡದ ಪ್ರಾರಂಭದಲ್ಲಿ. ರಾಮಲಕ್ಷ್ಮಣರು ಸೀತಾನ್ವೇಷಣೆ ಮಾಡುತ್ತ ಕಬಂಧನ ಸೂಚನೆಯ ಮೇರೆಗೆ ಸುಗ್ರೀವನ ಸಖ್ಯಕ್ಕಾಗಿ ಅವನನ್ನೇ ಹುಡುಕಿಕೊಂಡು ಋಶ್ಯಮೂಕಪರ್ವತದ ಸಮೀಪಕ್ಕೆ ಬರುವರು. ಅಣ್ಣನಾದ ವಾಲಿಯ ಭಯದಿಂದ ತನ್ನ ಪರಿವಾರದೊಡನೆ ಮತಂಗಾಶ್ರಮದ ಪರಿಸರದಲ್ಲಿ ಅವಿತುಕೊಂಡಿದ್ದ ಸುಗ್ರೀವನು ದೇವಲೋಕದಿಂದಿಳಿದು ಬಂದಂತಿದ್ದ ಅಶ್ವಿನೀಕುಮಾರರನ್ನು ಹೋಲುವ ರಾಮಲಕ್ಷ್ಮಣರನ್ನು ವಾಲಿಯ ಗೂಢಚಾರರೆಂದೇ ಭಾವಿಸಿ ಅವರ ವಿಷಯವನ್ನು ತಿಳಿಯಲು ತನ ಆಪ್ತಸಚಿವನಾದ ಹನುಮಂತನನ್ನು ಅವರಲ್ಲಿಗೆ ಕಳುಹಿದನು. ಈ ಸಂದರ್ಭದಲ್ಲಿ ಹನುಮಂತನು ಪ್ರದರ್ಶಿಸಿದ ಮೇಧಾಶಕ್ತಿಯನ್ನು ವಾಲ್ಮೀಕಿ ಮಹರ್ಷಿಗಳು ಬಹುಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಹನುಮಂತನು ಕಪಿರೂಪವನ್ನುತ್ಯಜಿಸಿ ಭಿಕ್ಷುರೂಪವನ್ನು ಧರಿಸುವನು. ಅತ್ಯಂತ ವಿನೀತನಾಗಿ ರಾಮಲಕ್ಷ್ಮಣರಲ್ಲಿಗೆ ಬಂದು ಅವರನ್ನುದ್ದೇಶಿಸಿ ಮೃದುವಾಗಿ ಸಂಭಾಷಿಸುವನು. 'ಎಲೈ ಮಹಾತ್ಮರೇ ದೇವರ್ಷಿಗಳಂತೆಯೂ ರಾಜಕುಮಾರರಂತೆಯೂ ಇರುವ ನೀವು ಕಠಿಣವ್ರತವನ್ನೂ ಕೈಕೊಂಡು ತಾಪಸವೇಷವನ್ನು ಧರಿಸಿದ್ದೀರಿ. ನೀವು ಈ ಪ್ರದೇಶಕ್ಕೆ ಯಾವ ಕಾರಣದಿಂದ ಬಂದಿದ್ದೀರಿ. ಈ ಕಾಡಿನಲ್ಲಿರುವ ಪ್ರಾಣಿಗಳನ್ನು ಮೃಗಗಳನ್ನು ತಮ್ಮ ಬರುವಿಕೆಯಿಂದ ಅಂಜಿಸುತ್ತಿದ್ದೀರಿ. ಈ ಪಂಪಾತೀರದಲ್ಲಿರುವ ವೃಕ್ಷಗಳನ್ನು ಸುತ್ತಲೂ ವೀಕ್ಷಿಸುತ್ತಿದ್ದೀರಿ. ನೀವು ನಾರುಬಟ್ಟೆಯನ್ನುಟ್ಟಿದ್ದೀರಿ. ಮಾರ್ಗಾಯಾಸದಿಂದ ನಿಟ್ಟುಸಿರು ಬಿಡುತ್ತಿದ್ದೀರಿ, ಸಿಂಹದಂತೆ ಪರಾಕ್ರಮಶಾಲಿಗಳಾದ ನೀವು ಕಾಂತಿಶಾಲಿಗಳೂ ರೂಪಸಂಪನ್ನರೂ ಆಗಿದ್ದೀರಿ. ರೂಪಲಾವಣ್ಯದಲ್ಲಿ ಒಬ್ಬರನ್ನೊಬ್ಬರು ಹೋಲುತ್ತಿದ್ದೀರಿ. ದೇವಲೋಕದಿಂದ ಇಳಿದು ಬಂದಂತೆ ಕಾಣುತ್ತಿದ್ದೀರಿ. ನಿಮ್ಮನ್ನು ನೋಡಿದರೆ ಚಂದ್ರ ಸೂರ್ಯರೇ ಭೂಮಿಗೆ ಇಳಿದು ಬಂದಂತಿದೆ. ಸಮಸ್ತ ಭೂಮಂಡಲವನ್ನು ರಕ್ಷಿಸಬಲ್ಲವರು ನೀವು. ನಿಮ್ಮ ಧನಸ್ಸುಗಳು ವಜ್ರಾಯುಧದಂತೆ ಕಂಗೊಳಿಸುತ್ತಿವೆ ಸುಂದರವಾದ ಬತ್ತಳಿಕೆ ನಿಶಿತಾಸ್ತ್ರಗಳಿಂದ ತುಂಬಿವೆ. ಬಾಣಗಳು ರೋಷದಿಂದ ಬುಸುಗುಟ್ಟುವ ಸರ್ಪಗಳಂತಿವೆ. ತಮ್ಮ ಖಡ್ಗಗಳು ಚಿನ್ನದ ಹಿಡಿಯಿಂದ ಅಲಂಕೃತವಾಗಿವೆ. ಸುಗ್ರೀವನೆಂಬ ವಾನರನಿದ್ದಾನೆ. ಅಣ್ಣನ ಬಾಧೆಗೊಳಗಾಗಿ ದುಃಖದಿಂದ ಈ ಲೋಕದಲ್ಲಿ ಅಲೆಯುತ್ತಿದ್ದಾನೆ. ಅವನು ಕಳುಹಿಸಿದ್ದುದರಿಂದ ನಾನು ಇಲ್ಲಿಗೆ ಬಂದಿದ್ದೇನೆ. ಧರ್ಮಾತ್ಮನಾದ ಸುಗ್ರೀವನು ನಿಮ್ಮೊಡನೆ ಸ್ನೇಹವನ್ನು ಬೆಳೆಸಲು ಇಚ್ಛಿಸುತ್ತಾನೆ ನಾನು ಅವನ ಸಚಿವ, ವಾಯುಪುತ್ರ ಅವನಿಗೆ ಹಿತವನ್ನು ಬಯಸಿ ರೂಪವನ್ನು ಮರೆಸಿಕೊಂಡಿದ್ದೇನೆ. ನಾನು ಇಷ್ಟಬಂದ ಕಡೆಗೆ ಕ್ಷಣಮಾತ್ರದಲ್ಲಿ ಹೋಗಬಲ್ಲೆ. ಇಷ್ಟವಾದ ರೂಪವನ್ನು ಧರಿಸಬಲ್ಲೆ' ಎಂದನು. ಮಾತನಾಡುವುದರಲ್ಲಿ ನಿಪುಣನಾದ ಹನುಮಂತನು ಮಾತಿನಭಾವವನ್ನು ಅರಿಯಬಲ್ಲ ರಾಮಲಕ್ಷ್ಮಣರಿಗೆ ಈ ರೀತಿ ಹೇಳಿ ಸುಮ್ಮನಾದನು. ಆ ಮಾತುಗಳಿಂದ ಸುಪ್ರೀತನಾದ ರಾಮನು ಲಕ್ಷ್ಮಣನಿಗೆ ಉಲ್ಲಾಸದಿಂದ ಹೀಗೆ ಹೇಳಿದನು 'ಸೌಮಿತ್ರಿ ! ಇವನು ಸುಗ್ರೀವ ಸಚಿವನಂತೆ, ಅವನನ್ನೇ ಹುಡುಕುತ್ತಿರುವ ನಮ್ಮಬಳಿಗೆ ತಾನೇ ಬಂದಿದ್ದಾನೆ. ಇವನು ಮಾತಿನ ಭಾವವನ್ನು ಅರಿಯಬಲ್ಲ ಮೃದುವಾಕ್ಯಗಳಿಂದ ಸ್ನೇಹಯುಕ್ತವಾಗಿ ಇವನೊಡನೆ ಸಂಭಾಷಿಸು. ಇವನು ಋಗ್ವೇದ ಯಜುರ್ವೇದ ಸಾಮವೇದಗಳನ್ನು ಅರ್ಥಸಹಿತವಾಗಿ ಅಭ್ಯಾಸಮಾಡಿರುವಂತಿದೆ. ಇಲ್ಲದಿದ್ದರೆ ಈ ರೀತಿ ಮಾತನಾಡಲು ಶಕ್ಯವಿಲ್ಲ ಈ ಹನುಮಂತನು ವ್ಯಾಕರಣ ಶಾಸ್ತ್ರವನ್ನು ವ್ಯಾಸಂಗಮಾಡಿರುವುದು ನಿಶ್ಚಯ. ಇವನು ಇಷ್ಟು ಮಾತನಾಡಿದರೂ ಒಂದು ಅಪಶಬ್ದವೂ ಬಂದಿಲ್ಲ. ಇವನು ಮಾತನಾಡುವಾಗ ಮುಖ, ಕಣ್ಣು, ಹಣೆ ಹುಬ್ಬುಗಳಲ್ಲಾಗಲಿ ಇತರ ಅವಯವಗಳಲ್ಲಾಗಲಿ ಯಾವ ವಿಕಾರವೂ ಕಾಣಲಿಲ್ಲ. ಮಾತನ್ನು ಅನಾವಶ್ಯಕವಾಗಿ ವಿಸ್ತರಿಸಲಿಲ್ಲ, ಸಂದೇಹಕ್ಕೆ ಎಡೆಯಾಗುವ ಅಸ್ಫುಟವಾದ ಉಚ್ಚಾರಣೆ ಇಲ್ಲ. ಎಲ್ಲಿಯೂ ಸ್ವಲ್ಪ ಮಾತುತಡವರಿಸಿಲ್ಲ, ಬಹುವೇಗವಾಗಿಯೂ ಮಾತನಾಡಿಲ್ಲ. ಈತನ ವಾಕ್ಯವು ಉರಸ್ಥವೂ ಆಗಿ ಮಧ್ಯಮ ಸ್ವರದಲ್ಲಿದೆ, ವ್ಯಾಕರಣ ಶುದ್ಧವಾಗಿಯೂ ಕ್ರಮ ಬದ್ಧವಾಗಿಯೂ ಇದೆ. ಮಾತಿನ ಶೈಲಿ ಮಧುರವೂ ಚೇತೋಹಾರಿಯಾಗಿಯೂ ಇದೆ. ಉರ ಕಂಠ ಶಿರಸ್ಸುಗಳಲ್ಲಿ ಅಭಿವ್ಯಕ್ತವಾಗಿ ಆಶ್ಚರ್ಯಕವಾದಮಾತು ಯಾರನ್ನು ತಾನೆ ಸಂತೋಷಗೊಳಿಸುವುದಿಲ್ಲ. ಈ ಬಗೆಯ ಗುಣಗಳಿಂದ ಕೂಡಿದವರು ಯಾವ ರಾಜನಿಗೆ ದೂತರಾಗಿರುವರೋ ಅಂತಹವರ ಎಲ್ಲ ಕಾರ್ಯಗಳೂ ಸಿದ್ಧಿಸುತ್ತವೆ.' ಎಂದನು. ಆಗ ಲಕ್ಷ್ಮಣನು ಹನುಮಂತನನ್ನು ಕುರಿತು 'ನಿನ್ನ ಮಾತಿನಂತೆಯೇ ನಾವು ನಡೆಯುತ್ತೇವೆ' ಎಂದನು. ಹನುಮಂತನಿಗೆ ಸಂತೋಷವಾಯಿತು. ಮನಸ್ಸಮಾಧಾನವಾಯಿತು. ರಾಮಸುಗ್ರೀವರ ಸಖ್ಯಕ್ಕೆ ದಾರಿಯಾಯಿತೆಂದೂ ಅದನ್ನು ಬೆಳೆಸಬೇಕೆಂದೂ ನಿಶ್ಚಯಿಸಿದನು. ಅದಕ್ಕನುಗುಣವಾಗಿ ರಾಮಲಕ್ಷ್ಮಣರು ಕಾಡಿಗೆ ಬರಲು ಕಾರಣವನ್ನು ತಿಳಿದು ಇಕ್ಷ್ವಾಕು ವಂಶದ ಪರಿಚಯವನ್ನು ಮಾಡಿಕೊಂಡನು ರಾವಣನು ಸುಗ್ರೀವನಾಗಿರುವ ವಿಷಯವನ್ನು ಮನಗಂಡನು. ಇಂಥ ಮಹಾಪುರುಷರೂ ಜಿತೇಂದ್ರಿಯರೂ ಆದ ಮಹಾನುಭಾವರು ಸುಗ್ರೀವನ ಅದೃಷ್ಟದಿಂದ ತಾನೇ ದೊರೆತಿದ್ದಾರೆ. ಅವನಿಗೆ ರಾಜ್ಯಪ್ರಾಪ್ತಿಯೂ ಭ್ರಾತೃವಧೆಯೂ ಕೈಗೂಡಿತೆಂದೇ ಭಾವಿಸಿದ. ಭಿಕ್ಷುರೂಪವನ್ನು ತ್ಯಜಿಸಿ ಅವರಿಬ್ಬರನ್ನು ತನ್ನ ಹೆಗಲ ಮೇಲೆ ಕೂರಿಸಿಕೊಂಡು ಹೋಗಿ ಸುಗ್ರೀವನಿಗೆ ಪರಿಚಯಮಾಡಿಸಿ ಅವರ ಮಾಹಾತ್ಮ್ಯವನ್ನೂ ವಿವರವಾಗಿ ತಿಳಿಯಪಡಿಸಿದ. ಸುಗ್ರೀವನಿಗೆ ಅತ್ಯಧಿಕ ಸಂತೋಷವಾಯಿತು. ಹನುಮಂತನು ರಾಮಸುಗ್ರೀವರಿಗೆ ಅಗ್ನಿಸಾಕ್ಷಿಕವಾಗಿ ಸ್ನೇಹವನ್ನು ಪ್ರತಿಷ್ಠಾಪಿಸಿದ. ರಾವಣನು ಸೀತೆಯನ್ನು ಅಪಹಾರ ಮಾಡುತ್ತಿದ್ದಾಗ ತನ್ನಗುರುತಿಗಾಗಿ ಆಕೆ ಒಡವೆಗಳನ್ನು ವಾನರ ಮಧ್ಯಕ್ಕೆ ಎಸೆದಿದ್ದಳು. ಹನುಮಂತನೇ ಅದನ್ನು ಶೇಖರಿಸಿಟ್ಟಿದ್ದ. ಆ ಆಭರಣಗಳನ್ನು ತೋರಿಸಿ ರಾಮನಿಗೆ ತಾತ್ಕಾಲಿಕ ಮನಸ್ಸಮಾಧಾನ ಮಾಡಿಯೂ ಆಯಿತು. ವಾಲಿವಧೆಯೂ ಆಯಿತು. ಅದಾದ ಮೇಲೆ ವಾಲಿಪತ್ನಿಯಾದ ತಾರೆಯನ್ನು ಸಮಾಧಾನ ಮಾಡಿದವನೂ ಹನುಮಂತನೇ. ರಾಮನ ಒಪ್ಪಿಗೆಯ ಮೇಲೆ ಸುಗ್ರೀವ ಪಟ್ಟಾಭಿಷೇಕವು ನಡೆದರೂ ಆಂಜನೇಯನ ಸೂಚನೆಯಮೇಲೆಯೇ ಪಟ್ಟಾಭಿಷಿಕ್ತನಾದಮೇಲೆ ಕಾಮಾಸಕ್ತನಾಗಿ ಸುಗ್ರೀವನು ರಾಮನ ಕಾರ್ಯದಲ್ಲಿ ಉದಾಸೀನನಾಗಿದ್ದಾಗ ಅವನಿಗೆ ಮಿತ್ರಕಾರ್ಯದ ಆವಶ್ಯಕತೆಯನ್ನೂ ಮಿತ್ರದ್ರೋಹದಿಂದಾಗುವ ಪರಿಣಾಮವನ್ನು ತಿಳಿಸಿ, ಸುಗ್ರಿವನನ್ನು ಕಾರ್ಯೋನ್ಮುಖನನ್ನಾಗಿ ಮಾಡಿದವನೂ ಹನುಮಂತನೇ.

ಸೀತೆಯನ್ನು ಹುಡುಕುವುದಕ್ಕೆ ವಾನರರನ್ನು ಅರಿಸಿದಾಗ ದಕ್ಷಿಣದಿಕ್ಕಿನಲ್ಲಿ ಹುಡುಕುವ ಕಾರ್ಯವು ಅಂಗದಾದಿಗಳೊಡನೆ ಹನುಮಂತನ ಪಾಲಿಗೆ ಬಂದಿತು. ಆಗ ಸುಗ್ರೀವನು ಆ ಕಾರ್ಯವನ್ನು ಮಾಡಲು ಹನುಮಂತನೇ ಸಮರ್ಥನೆಂದರಿತು ಅವನನ್ನು ಕುರಿತು ಹೀಗೆ ಹೇಳಿದನು 'ವಾನರೋತ್ತಮ, ನಿನ್ನ ಗತಿ ವೇಗಕ್ಕೆ ತಡೆಯೆಂಬುದೇ ಇಲ್ಲ ಭೂಮ್ಯಾಕಾಶಗಳಲ್ಲಾಗಲಿ ಅತಿದೂರವಾದ ಅಂಬರಮಾರ್ಗದಲ್ಲಾಗಲಿ ನೀನು ನಿರಾತಂಕವಾಗಿ ಸಂಚರಿಸಬಲ್ಲೆ. ದೇವಲೋಕಕ್ಕಾದರೂ ಹೋಗಬಲ್ಲೆ. ಜಲಮಾರ್ಗದಲ್ಲಾದರೂ ತಡೆಯಿಲ್ಲದೆ ಸಾಗಬಲ್ಲೆ. ಅಸುರಗಂಧರ್ವಲೋಕಗಳು ನಿನಗೆ ಸುಪರಿಚಿತ. ನಾಗನರ ಲೋಕಗಳು ಸುವಿದಿತ, ದೇವಲೋಕವೂ ಅಪರಿಚಿತವಲ್ಲ. ಸಾಗರ ಭೂಧರಗಳ ಸಹಿತ ಸಮಸ್ತಲೋಕಗಳನ್ನೂ

ನಿನ್ನ ಬಲ್ಲೆ. ನಿನ್ನ ಗಮನ ಶಕ್ತಿ. ನಿನ್ನ ವೇಗ, ನಿನ್ನ ತೇಜಸ್ಸು, ನಿನ್ನ ಚಟುವಟಿಕೆ ಇವೆಲ್ಲ ನಿನ್ನ ತಂದೆಯ ಅದ್ಭುತಗುಣಗಳಂತಿವೆ. ಸೀತಾ ದೇವಿಯ ಹೇಗೆ ಲಭಿಸುವಳೆಂಬುದನ್ನು ನೀನೇ ನೋಡಿಕೊಳ್ಳಬೇಕು. ಹನುಮಂತ! ಬಲ, ಬುದ್ಧಿ ಪರಾಕ್ರಮಗಳು ನಿನ್ನಲ್ಲಿ ನೆಲಸಿವೆ, ನೀತಿ ಕೋವಿದನಾದ ನಿನ್ನಲ್ಲಿಯೇ ದೇಶಕಾಲಾನುಗುಣವಾದ ವರ್ತನೆಯೂ ಕಾರ್ಯ ನೀತಿಯೂ, ಕಂಡು ಬರುತ್ತಿದೆ' ಎಂದನು. ಆಗ ರಾಮನು ಹನುಮಂತನಲ್ಲಿ ಸುಗ್ರೀವನಿಟ್ಟ ಕಾರ್ಯದ ಜವಾಬ್ದಾರಿಯನ್ನೂ ನೋಡಿ ಅವನೇ ಕಾರ್ಯಸಾಧನೆಯಲ್ಲಿ ಸಮರ್ಥನೆಂದು ತಿಳಿದು ತನ್ನ ನಾಮಾಂಕಿತವಾದ ಉಂಗುರವನ್ನು ಸೀತೆಗೆ ಗುರುತಿಗೆಂದು ಕೊಟ್ಟನು. ಅಲ್ಲದೆ ಹನುಮಂತನನ್ನು ಕುರಿತು 'ನೀನು ಬಹು ಬಲಾಢ್ಯನಾಗಿದ್ದೀಯೆ. ನಿನ್ನ ಬಲವನ್ನೇ ನಾನು ನಂಬಿಕೊಂಡಿದ್ದೇನೆ. ಸಿಂಹ ಪರಾಕ್ರಮಿಯಾದ ನಿನ್ನ ಪರಾಕ್ರಮದಿಂದ ನನ್ನ ಸೀತೆ ದೊರಕುವಂತೆ ಮಾಡು' ಎಂದನು ಹನುಮಂತನು ಆ ಉಂಗುರವನ್ನು ತಲೆಯ ಮೇಲಿಟ್ಟುಕೊಂಡು ಕಪಿಸೇನೆ ಯೊಡನೆ ಹೊರಟನು.

ಮೂರುದಿಕ್ಕುಗಳಿಗೂ ಹೋಗಿದ್ದ ವಾನರ ಸೈನ್ಯವು ಸೀತೆಯನ್ನು ಕಾಣದೆ ನಿರುತ್ಸಾಹದಿಂದ ಹಿಂದಿರುಗಿದುವು ದಕ್ಷಿಣದಿಕ್ಕಿಗೆ ಹೋದ ವಾನರರ ಮೋಹರವು ಅವಧಿಯು ಮೀರಿದರೂ ಸೀತೆಯನ್ನು ಕಾಣದೆ ಅಲೆದು ಕೊನೆಗೆ ಸಂಪಾತಿಯಿಂದ ತಿಳಿದು ಮಧ್ಯೆ ಇರುವ ಸಾಗರ ಲಂಘನಕ್ಕೆ ಹನುಮಂತನೇ ಸಮರ್ಥನೆಂದು ನಿಶ್ಚಯಿಸಿತು.

ಜಾಂಬವಂತನು ಹನುಮಂತನಿಗೆ ಅವನ ಶಕ್ತಿಯನ್ನು ತಿಳಿಸಿದ ಮೇಲೆ ಅವನ ಉತ್ಸಾಹವು ಎಲ್ಲೆಯನ್ನು ಮೀರಿತು. ತನ್ನ ಶಕ್ತಿಯ ವಿಷಯವಾಗಿ ಆರ್ಭಟಿಸತೊಡಗಿದನು. ಆಕಾರವು ಮೇರು ಸದೃಶವಾಯಿತು 'ಸಾಗರವನ್ನು ಕಲಕುವೆನು, ಭೂಮಿಯನ್ನು ಮುರಿಯುವೆನು, ಪರ್ವತವನ್ನು ಚೂರ್ಣಮಾಡುವೆನು, ಆಕಾಶವನ್ನು ನುಂಗುವೆನು, ವಜ್ರಧಾರಿಯಾಗಿ ಇಂದ್ರನೇ ಬರಲಿ, ಬ್ರಹ್ಮನೇ ಅಡ್ಡಗಟ್ಟಲಿ, ಸೀತೆಯನ್ನು ತಂದೇ ತರುತ್ತೇನೆ. ಅವಶ್ಯಕವಾದರೆ, ಇಡೀ ಲಂಕಾನಗರವನ್ನೇ ಹೊತ್ತು ತರುತ್ತೇನೆ' ಎಂದು ಸಿಂಹನಾದ ಮಾಡಿದನು. ಎಲ್ಲ ವಾನರ ಶ್ರೇಷ್ಠರೂ ಅವನನ್ನು ಹರಸಿದರು. ಹನುಮಂತನು ಹಾರಿದ ರಭಸಕ್ಕೆ ಅವನು ಹೇಳಿದ ಹಾಗೆಯೇ ಪಂಚಭೂತಗಳೂ ಅಸ್ತವ್ಯಸ್ತವಾದುವು.

ಮುಂದೆ ನಡೆದ ಕಾರ್ಯವೆಲ್ಲ ಸುಂದರ ಕಾಂಡದಲ್ಲಿ ವರ್ಣಿತವಾಗಿದೆ. ಸುಂದರ ಕಾಂಡವು ಇಡೀ ರಾಮಾಯಣದಲ್ಲಿ ಬಹು ಸುಂದರವಾಗಿದೆ. ಅಲ್ಲಿ ವರ್ಣಿತವಾಗಿರುವುದೆಲ್ಲ ಹನುಮಂತನ ಶೌರ್ಯ ವೀರ್ಯ ಪರಾಕ್ರಮಗಳ ವೈಭವ. ಸುಂದರ ಎನ್ನುವುದಕ್ಕೆ ಕಪಿ ಎಂಬ ಅರ್ಥವಿದೆ ಇಲ್ಲಿ ವಾನರೋತ್ತಮನಾದ ಹನುಮಂತನಿಗೇ ಅನ್ವಯಿಸುತ್ತದೆ ಅಂದರೆ ಅದು ಹನುಮಂತನ ಕಾಂಡ. ಹನುಮಂತ ಸಮುದ್ರಲಂಘನಕ್ಕೆ ಹೊರಟಾಗಲೇ ಅವನಿಗೆ ಅವನ ಸಾಮರ್ಥ್ಯ ಚೆನ್ನಾಗಿ ತಿಳಿದಿತ್ತು. ತನ್ನ ಸಹಪಾಠಿಗಳಿಗೆ ಹೇಳಿದ ಮಾತುಗಳಿವು. 'ನಾನು ಲಂಕಾಪುರದಲ್ಲಿ ಸೀತೆಯನ್ನು ಹುಡುಕುತ್ತೇನೆ. ಅಲ್ಲಿ ಅವಳು ಸಿಕ್ಕದಿದ್ದರೆ ನೇರವಾಗಿ ಸ್ವರ್ಗಕ್ಕೆ ಹಾರುತ್ತೇನೆ ಅಲ್ಲಿಯೂ ಸೀತೆಯು ಇಲ್ಲದಿದ್ದರೆ ಪಾತಾಳಕ್ಕೆ ಹೋಗಿ ಹುಡುಕುತ್ತೇನೆ ಅಲ್ಲಿಯೂ ಸಿಕ್ಕದಿದ್ದರೆ ರಾವಣ ಸಹಿತವಾಗಿ ಲಂಕೆಯನ್ನೇ ಕಿತ್ತು ತರುತ್ತೇನೆ.' ಹೇಗಾದರೂ ನಾನು ಕೃತಕೃತ್ಯನಾಗಿ ಬರುತ್ತೇನೆ. ಮುಂದೆ ಮಹೇಂದ್ರ ಪರ್ವತದಿಂದ ಹಾರಿಯೇ ಬಿಟ್ಟ, ದಾರಿಯಲ್ಲಿ ವಿಘ್ನವೊಡ್ಡಿದ ಸುರಸೆ, ಸಿಂಹಿಕೆ, ಲಂಕಿಣಿಯರನ್ನು ವಿವಿಧ ರೀತಿಯಲ್ಲಿ ಸೋಲಿಸಿ, ಸಾಯಂಕಾಲದಲ್ಲಿ ಲಂಕಾಪಟ್ಟಣವನ್ನು ಸೇರಿ ತನ್ನ ಗುರುತುಯಾರಿಗೂ ತಿಳಿಯದಿರುವುದಕ್ಕಾಗಿ ಶರೀರವನ್ನು ಕುಂದಿಸಿಕೊಂಡ. ಎಚ್ಚರಿಕೆಯಿಂದ ಎಲ್ಲರ ಮನೆಯನ್ನು ಹುಡುಕಿದ. ರಾವಣನ ಪುಷ್ಪಕ ವಿಮಾನವನ್ನು ಕಂಡು ಅಂತಃಪುರದ ಪಾಕಶಾಲಾದಿಗಳಲ್ಲಿ ಸಂಚರಿಸಿದ. ಅಲ್ಲಿ ಅಸ್ತವ್ಯಸ್ತವಾಗಿ ನಿರ್ವಸ್ತ್ರರಾಗಿದ್ದ ವಿವಿಧ ಸ್ತ್ರೀಯರನ್ನು ಕಂಡು ತನ್ನ ಬ್ರಹ್ಮಚರ್ಯಕ್ಕೆ ಕುಂದುಂಟಾಯಿತೋ ಎಂದು ಚಿಂತಿಸಿದ. ಎಲ್ಲಕ್ಕೂ ಮನವೇ ಕಾರಣವಾದುದರಿಂದಲೂ ತನ್ನ ಮನಸ್ಸಿನಲ್ಲಿ ಯಾವ ವಿಕಾರವುಂಟಾಗದಿದ್ದರಿಂದಲೂ ತಾನು ಪಾಪರಹಿತನೆಂದು ಸಮಾಧಾನ ಮಾಡಿಕೊಂಡ. ಅಂತಃಪುರದಲ್ಲಿ ಮಹಾದೀರ್ಘಕಾಯನೂ, ಬಲಶಾಲಿಯೂ ಆದ ರಾವಣನನ್ನು ಕಂಡು ಚಕಿತನಾದ. ಅವನ ಪಕ್ಕದಲ್ಲಿದ್ದ ಮಂಡೋದರಿಯನ್ನು ನೋಡಿ ಅವಳನ್ನು ಸೀತೆಯೆಂದೇ ಭ್ರಮಿಸಿ ತನ್ನ ಕಾರ್ಯ ಸಾಧನೆಯಾಯಿತೆಂದು ಹಿಗ್ಗಿದ, ಕುಣಿದ, ಬಾಲವನ್ನು ಚುಂಬಿಸಿ ತನ್ನ ಕಪಿಸ್ವಭಾವವನ್ನು ಪ್ರದರ್ಶಿಸಿದ, ಉತ್ತರಕ್ಷಣದಲ್ಲಿಯೇ ಸೀತಾದೇವಿಯ ಅನನ್ಯ ಪರಿಶುದ್ಧ ಪಾತಿವ್ರತ್ಯವನ್ನು ನೆನೆದು ಅವಳು ಎಂದೂ ಪರವಶಳಾಗಳೆಂದು ಸಿದ್ಧಾಂತಮಾಡಿದ. ಸೀತೆಯು ಸಿಕ್ಕಲಿಲ್ಲ. ಹಾಗೆಯೇ ಹಿಂತಿರುಗುವುದು ಸರಿಯಲ್ಲವೆಂದು ಚಿಂತಿಸಿದ. ಆತ್ಮಹತ್ಯವನ್ನು ಮಾಡಿಕೊಳ್ಳಲೂ ಯೋಚಿಸಿದ. ಅದರ ಫಲವು ಇನ್ನೂ ಘೋರವಾಗಿ ಕಂಡಿತು. ಕೊನೆಗೆ ಉತ್ಸಾಹ ಶೂನ್ಯವಾಗಬಾರದೆಂದು ಅಶೋಕವನದ ಕಡೆಗೆ ದೃಷ್ಟಿ ಪ್ರಸಾರಮಾಡಿದ. ಅಲ್ಲಿ ಹೋಗಿ ಶಿಂಶುಪಾ ವೃಕ್ಷದ ನೆರಳಿನಲ್ಲಿ ಕುಳಿತ ಸೀತಾ ದೇವಿಯು ಸ್ಥಿತಿ ಅವನ ಕರುಳನ್ನು ಕೊರೆಯಿತು. ಏಕವಸ್ತ್ರವನ್ನು ಧರಿಸಿ ಕೃಶವಾಗಿ ರಾಕ್ಷಸ ಸ್ತ್ರೀಯರ ಮಧ್ಯದಲ್ಲಿ ಶೋಕಿಸುತ್ತಿದ್ದ ಆಕೆಯ ದುಃಖವನ್ನು ನಿವಾರಣೆ ಮಾಡಬೇಕೆಂದು ತೀರ್ಮಾನಿಸಿದ. ಆವೇಳೆಗೆ ರಾವಣನು ಬಂದು ಅವಳ ಪ್ರೇಮ ಭಿಕ್ಷೆಯನ್ನು ಯಾಚಿಸಿ ವಿಫಲವಾಗಿ ರೋಷಾವಿಷ್ಟನಾಗಿ ಅವಳಿಗೆ ಅವಧಿಯನ್ನು ನಿಷ್ಕರ್ಷಿಸಿ ಹೋದ. ಹುಲ್ಲು ಕಡ್ಡಿಯನ್ನು ಮಧ್ಯವರ್ತಿಯನ್ನಾಗಿಸಿ ರಾವಣನಿಗೆ ಅವಳಿತ್ತ ಉತ್ತರವು ಅವಳ ಚಿತ್ತ ಸ್ಥೈರ್ಯವನ್ನು ಪತಿ ಭಕ್ತಿಯನ್ನು ಘೋಷಿಸುತ್ತಿತ್ತು. ಅಸಹಾಯಳಾಗಿ ಸೀತೆಯು ತನ್ನ ಪ್ರಾಣವನ್ನು ಕಳೆದು ಕೊಳ್ಳಲು ಯತ್ನಿಸಿದಾಗ ರಾಮನ ವಿರಹಕ್ಕೆ ಕಾರಣವೂ ಅವಳ ಅಸಹಾಯಕತೆಯೂ ವಿಶದವಾಯಿತು. ಮರದ ಮೇಲಿಂದ ಕೆಳಗಿಳಿದು ಅವಳನ್ನು ಮಾತನಾಡಿಸಲು ಅವನು ಉಪಯೋಗಿಸಿದ ಕ್ರಮ ಕ್ರಮವಾದ ಕಾರ್ಯರೀತಿಯೂ ಆಶ್ಚರ್ಯಕರವಾಗಿದೆ ಅವನ ಮೇಧಾಶಕ್ತಿಗೆ ಪ್ರತ್ಯಕ್ಷ ಪ್ರಮಾಣವಾಗಿದೆ. ಮೊದಲು ಅವಳ ದೃಷ್ಟಿಯನ್ನು ಸೆಳೆಯಲು ಇಕ್ಷ್ವಾಕು ವಂಶದ ಕೀರ್ತನೆಯನ್ನು ಮಾಡಿದ. ರಾಮನ ಚರಿತ್ರೆಯನ್ನೂ ತಿಳಿಸಿದ, ಮೆಲ್ಲಗೆ ಕೆಳಗಿಳಿದು ಸೀತೆಯ ವಿಷಯವಾಗಿ ಬಹು ಸೌಮ್ಯವಾಗಿ ಪ್ರಶ್ನಿಸಿದ. ಅವಳ ನಂಬಿಕೆಗಾಗಿ ರಾಮಲಕ್ಷ್ಮಣರ ಸಮಸ್ತಗುಣಗಳನ್ನು ಕಣ್ಣಿಗೆ ಕಟ್ಟಿದಂತೆ ವರ್ಣಿಸಿದ, ರಾಮ ನಾಮಾಂಕಿತವಾದ ಉಂಗುರವನ್ನು ಅವಳಿಗೆ ಸಮರ್ಪಿಸಿದ. ರಾಮನು ಅವಳಲ್ಲಿರುವ ಮಮತೆಯನ್ನು ಮುಂದಿನ ಶ್ಲೋಕಗಳಲ್ಲಿ ವಿಶದಪಡಿಸಿದ.

ನಿತ್ಯಂ ಧ್ಯಾನಪರೋ ರಾಮಃ
ನಿತ್ಯಂ ಶೋಕ ಪರಾಯಣಃ ।
ನಾನ್ಯತ್ ಚಿಂತಯತೇ ಕಿಂಚಿತ್
ತ್ವತ್ಕೃತೇ ಕಾಮವಶಂಗತಃ ।।

ಅನಿದ್ರಸ್ಸತತಂ ರಾಮಃ
ಸುಪ್ತೋಪಿ ಚ ನರೋತ್ತಮಃ ।
ಸೀತೇತಿ ಮಧುರಾಂ ವಾಣೀಂ
ವ್ಯಾಹರನ್ ಪ್ರತಿಬುಧ್ಯತೇ ।।

ದೃಷ್ಟ್ವಾಫಲಂ ವಾ ಪುಷ್ಪಂ ವಾ
ಯಚ್ಚಾನ್ಯತ್ ಸ್ತ್ರೀ ಮನೋಹರವತ್ ।
ಬಹುಶೋ ಹಾ ಪ್ರಿಯೇತಿ
ಶ್ವಸಂಸ್ತ್ವಾಮಭಿಭಾಷತೇ ।।

ಸೀತೆಗೆ ಪೂರ್ಣವಾಗಿ ನಂಬಿಕೆಯುಂಟಾಯಿತು. ರಾಮನು ತನ್ನನ್ನೂ ಕರೆದುಕೊಂಡು ಹೋಗುತ್ತಾನೆಂಬ ಧೈರ್ಯವುಂಟಾಯಿತು. ಹನುಮಂತನನ್ನು ಬಾಯಿತುಂಬ ಹೊಗಳಿದಳು.

ವಿಕ್ರಾಂತಸ್ತ್ವಂ ಸಮರ್ಥಸ್ತ್ವಂ
ಪ್ರಾಜ್ಞಸ್ತ್ವಂ ವಾನರೋತ್ತಮ
ಯೇನೇದಂ ರಾಕ್ಷಸಪದಂ
ತ್ವಯೈಕೇನ ಪ್ರಧರ್ಷಿತಂ

ರಾಮನಿಗೆ ಅಭಿಜ್ಞಾನಕ್ಕಾಗಿ ತನ್ನ ಚೂಡಾಮಣಿಯನ್ನು ಕೊಟ್ಟಳು ರಾಮನು ತಕ್ಷಣ ತನ್ನ ಶೋಕವಿಮೋಚನ ಮಾಡುವ ಹಾಗೆ ಮಾಡೆಂದು ಕೇಳಿ ಕೊಂಡಳು, ತನ್ನ ಬೆನ್ನಿನ ಮೇಲೆ ತಕ್ಷಣ ರಾಮನಲ್ಲಿಗೆ ಕರೆದೊಯ್ಯುತ್ತೇನೆಂದು ಹನುಮಂತನು ಹೇಳಿದಾಗ ಪರಗಾತ್ರ ಸ್ಪರ್ಶಮಾಡುವುದಿಲ್ಲವೆಂದು ತಿಳಿಸಿದ ಅವಳ ನಿಷ್ಕರ್ಷೆಯನ್ನು ಕೇಳಿ, ಅವಳನ್ನು ಶ್ಲಾಘಿಸಿ ಅಲ್ಪಕಾಲದಲ್ಲಿ ಅವಳ ಶೋಕ ವಿಮೋಚನವಾಗುವುದೆಂದು ತಿಳಿಸಿ ಹಿಂತಿರುಗಲನುವಾದ ಅಷ್ಟರಲ್ಲಿ ತಾನು ಉತ್ತಮವರ್ಗದ ದೂತನಾದುದರಿಂದ ಸ್ವಾಮಿ ಹೇಳಿದ ಕಾರ್ಯಕ್ಕಿಂತ ಹೆಚ್ಚು ಕಾರ್ಯ ನಡೆಸಬೇಕೆಂದು ಯೋಚಿಸಿ ರಾವಣನ ಮೂಲ ಬಲದ ಸ್ವರೂಪವನ್ನು ತಿಳಿಯಲು ಅಶೋಕವನವನ್ನು ಧ್ವಂಸ ಮಾಡಿದ ಕ್ರುದ್ಧನಾದ ರಾವಣನು ಕಿಂಕರರನ್ನು ಹನುಮಂತನ ಮೇಲೆ ಕಳುಹಿಸಿದ. ಅವರೆಲ್ಲರನ್ನು ಬಹು ಸುಲಭವಾಗಿ ಸಂಹರಿಸಿ ಲಂಕಾ ಭಯಂಕರನಾಗಿ ಉದ್ದೇಶಪೂರ್ವಕವಾಗಿಯೇ ಇಂದ್ರ ಜಿತುವಿನ ಬ್ರಹ್ಮಾಸ್ತ್ರದಿಂದ ಬಂಧಿತನಾಗಿ ರಾವಣನನ್ನು ಸಂಧಿಸುವನು. ಹನುಮಂತನು ರಾವಣನಿಗೆ ಮಾಡಿದ ಉಪದೇಶವು ಬಹು ನೀತಿಯುಕ್ತವಾಗಿದೆ ಕುಪಿತನಾದ ರಾವಣನು ಹನುಮಂತನನ್ನು ಮೊದಲು ವಧಿಸಲು ಉದ್ದೇಶಿಸಿ ವಿಭೀಷಣನ ಪ್ರಾರ್ಥನೆಯ ಪ್ರಕಾರ ದೂತವಧೆಯು ನಿಷೇಧವೆಂದು ಮನಗಂಡು ಅವನನ್ನು ದಂಡಿಸುವುದಕ್ಕಾಗಿ ಅವನ ಬಾಲಕ್ಕೆ ಬೆಂಕಿಯನ್ನಿಡಿಸಿದ. ಹನುಮಂತನು ಅದನ್ನು ತನಗೆ ಸಹಾಯಕವಾಗಿಯೇ ಭಾವಿಸಿ ಲಂಕಾಪಟ್ಟಣವನ್ನು ಸುಟ್ಟು ಹಾಕಿದನು ಸೀತೆಯ ಕ್ಷೇಮದಲ್ಲಿ ಕಾತರನಾದ ಹನುಮಂತನು ಲಂಕಾದಹನದ ಸಂದರ್ಭದಲ್ಲಿ ಸೀತೆಯೂ ದಹ್ಯಳಾಗಿರಬಹುದೆಂದು ಕಳವಳಿಸಿ ಕೊನೆಗೆ ಚಾರಣರಮಾತಿನಿಂದ ಹರ್ಷಗೊಂಡು ಅಶೋಕವನದಲ್ಲಿ ಪುನಃ ಸೀತೆಯನ್ನು ಹೋಗಿ ನೋಡಿ ಸಂತೋಷದಿಂದ ಸಮುದ್ರವನ್ನು ದಾಟಿ ಹಿಂತಿರುಗಿ ಸೀತೆಯು ಸಿಕ್ಕಿದ ವಿಷಯವನ್ನು ತನ್ನ ಗೆಳೆಯರಿಗೆಲ್ಲ ತಿಳಿಸಿದನು ಶುಭ ಸಮಾಚಾರವನ್ನು ತಿಳಿದು ತನ್ನಲ್ಲಿಗೆ ಬರಮಾಡಿಕೊಂಡ ರಾಮನನ್ನು ಕುರಿತು ಅವನ ನಂಬಿಕೆಗಾಗಿ ಅವಳ ದುಃಸ್ಥಿತಿಯನ್ನು ವಿವರಿಸಿ,

ಏವಂ ಮಯಾಭಾಗಾ
ದೃಷ್ಟ್ವಾ ಜನಕ ನಂದಿನೀ ।
ಉಗ್ರೇಣ ತಪಸಾಯುಕ್ತಾ
ತ್ವದ್ಭಕ್ತ್ಯಾ ಪುರುಷರ್ಷಭ ॥

ಎಂದು ತಿಳಿಸಿ ಅವಳ ಅನನ್ಯ ಪತಿಪರಾಯಣತೆಯನ್ನು ದೃಢ ಪಡಿಸಿದನು. ರಾಮನಿಗೆ ಸೀತೆಯ ಚೂಡಾಮಣಿಯು ಕೈಸೇರಿತು. ಅವನು ಅತ್ಯಂತ ಸಂತುಷ್ಟನಾಗಿ 'ಇತರರಿಂದ ಅಸಾಧ್ಯವಾದ ಕೆಲಸವನ್ನು ಹನುಮಂತನು ನಡೆಸಿಬಿಟ್ಟನು. ಅವನು ಪ್ರಥಮವರ್ಗದ ದೂತಶ್ರೇಣಿಗೆ ಸೇರಿದವನು' ಎಂದು ಕೊಂಡಾಡಿದನು.

ಮುಂದೆ ವಾನರ ಸೈನ್ಯವು ಲಂಕಾಭಿಮುಖವಾಗಿ ನಡೆದು ಸಮುದ್ರತೀರವನ್ನು ಸೇರುವುದು. ರಾವಣನ ದುರ್ಗಬಲವನ್ನು ಹನುಮಂತನು ರಾಮನಿಗೆ ವಿವರವಾಗಿ ತಿಳಿಯ ಪಡಿಸಿದನು ಅಣ್ಣನಿಂದ ತಿರಸ್ಕೃತನಾದ ವಿಭೀಷಣನು ರಾಮನಿಗೆ ಶರಣಾಗಲು ತನ್ನ ಸಚಿವರೊಡನೆ ಬರುವನು ವಿಭೀಷಣ ಸಂಗ್ರಹ ಕಾರ್ಯ ಪೌಲಸ್ತ್ಯವಧೆಯ ದೃಷ್ಟಿಯಿಂದ ಬಹುಮುಖ್ಯವಾದುದು. ಸುಗ್ರೀವಾದಿಗಳು ಅವನನ್ನು ತಮ್ಮ ಪಕ್ಷಕ್ಕೆ ಸೇರಿಸಿ ಕೊಳ್ಳುವ ವಿಷಯದಲ್ಲಿ ವಿಶೇಷವಾಗಿ ನಿಷೇಧಿಸುವರು. ಆ ಸಂದರ್ಭದಲ್ಲಿ ಆಂಜನೇಯನ ಮಾತುಗಳು ಬಹುತೂಕವಾದುವು. ರಾಮನೇನೋ ತನ್ನಲ್ಲಿ ಒಂದು ಸಲ ಶರಣವೆಂದವ

( 26ನೇ ಪುಟ ನೋಡಿ )

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 7–30 ರಿಂದ 9–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 9–00 ರಿಂದ 10–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 10–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ [illegible]–00 ರಿರಿದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

ಪೇಷ್ಕಾರ್.

ಹರಿದಾಸ ವಾಣಿ

# ಶ್ರೀ ಪಾದರಾಜರು - ಅನ್ನಮಾಚಾರ್ಯ

ಕನ್ನಡ ಹರಿದಾಸ ಸಾಹಿತ್ಯದಲ್ಲಿ ಶ್ರೀ ಪಾದರಾಜರಿಗೆ ಅಗ್ರಸ್ಥಾನವಿದೆ. ಇವರ ಕಾಲವನ್ನು ದಾಸ ಸಾಹಿತ್ಯದ ಅರುಣೋದಯ ಕಾಲವೆಂದು ಹೇಳುವುದು ಕನ್ನಡಿಗರ ಸಂಪ್ರದಾಯ. ಇದೇ ಪ್ರಕಾರ ತೆಲುಗು ಸಂಕೀರ್ತನ ಶಾಖೆಯಲ್ಲಿ ಅನ್ನಮಾಚಾರ್ಯರಿಗೆ ಪ್ರಮುಖ ಸ್ಥಾನವಿದೆ. ಈ ವಾಗ್ಗೇಯಕಾರರಿಗೆ 'ಪದಕವಿತಾ ಪಿತಾಮಹ' ನೆಂಬ ಪಟ್ಟವಿದೆ ಇವರಿಬ್ಬರೂ ಸಮಕಾಲೀನರು.

ಜೀವನಪರ್ಯಂತ ಬ್ರಹ್ಮಚರ್ಯವನ್ನು ಪಾಲಿಸಿ ಒಂದು ಮಠಕ್ಕೆ ಮೂಲ ಪುರುಷರಾದ ಕೀರ್ತಿ ಶ್ರೀಪಾದರಾಜರಿಗೆ ಸಲ್ಲುತ್ತದೆ. ಬಾಲ್ಯದಿಂದ ಭಕ್ತರಾಗಿ ದಾಂಪತ್ಯ ಜೀವನವನ್ನು ಅನುಭವಿಸಿ ಶ್ರೀ ವೆಂಕಟೇಶ್ವರಾಂಕಿತವಾಗಿ 32 ಸಾವಿರ ಸಂಕೀರ್ತನೆಗಳನ್ನು ಹಾಡಿದ ಧನ್ಯಜೀವಿ ಅನ್ನಮಯ್ಯ. ಶ್ರೀಪಾದರಾಜರು ಸನ್ಯಾಸಿಗಳಾಗಿದ್ದರು, ವ್ಯಾಸರಾಯಾದಿಗಳನ್ನು ಪುತ್ರರಂತೆ ಅಭಿಮಾನಿಸಿ, ಕೊಂಡಾಡಿ, ದೇವರ ನಾಮಗಳನ್ನು ಹಾಡಿ ಹಾಡಿಸಿದರು. ಆದರೆ ಅನ್ನಮಾಚಾರ್ಯರು ತಮ್ಮ ಪುತ್ರ ಪೌತ್ರಾದಿಗಳಿಗೆ, ಉಪದೇಶಮಾಡಿ ಸಂಕೀರ್ತನೆಗಳನ್ನು ಬರೆದು, ಬರೆಸಿದರು

ಇವರಿಬ್ಬರೂ ಪೆನುಗೊಂಡೆ ಪಾಲಕನಾದ ಸಾಳ್ವ ನರಸಿಂಹರಾಯನಿಗೆ ಸನ್ನಿಹಿತರು. ಮಹಿಮಾನ್ವಿತನಾದ ಅನ್ನಮಯ್ಯನ ವರಗಳಿಂದ, ಸಹವಾಸದಿಂದ ಸಾಮಾನ್ಯ ದಂಡನಾಥನು ಸಾರ್ವಭೌಮನಾದನು. ಆ ನರಸಿಂಗನು ಬ್ರಹ್ಮಹತ್ಯಾ ದೋಷದಿಂದ ಮನನೊಂದಿದ್ದ ಕಾಲದಲ್ಲಿ ಶ್ರೀ ಪಾದರಾಜರು ಆ ಭೀತಿಯನ್ನು ಹೋಗಲಾಡಿಸಿ ಉದ್ಧರಿಸಿದರು. ಶ್ರೀನಿಧಿತೀರ್ಥರು ತಮ್ಮ ಶ್ರೀ ಪಾದರಾಜಾಷ್ಟಕದಲ್ಲಿ ಈ ಘಟನೆಯನ್ನು ಉಲ್ಲೇಖ ಮಾಡಿದ್ದಾರೆ.

ನಮ್ಯದ್ವೀರ ನೃಸಿಂಹನಾಮ ನೃಪತೇ
ಭೂರ್ದೇವ ಹತ್ಯಾ ವ್ಯಥಾಂ
ದೂರೀಕೃತ್ಯ ತದರ್ಪಿತೋಜ್ವಲ ಮಹಃ
ಸಿಂಹಾಸನೇ ಸಂಸ್ಥಿತಃ
ಸೇವ್ಯೇ ಪೂರ್ವ ಕವಾಟ ನಾಮಕಪುರೇ
ಸರ್ವೇಷ್ಟಸಿದ್ಧಿಪ್ರದಃ
ಸಃ ಶ್ರೀ ಪಾದಯತೀಶ್ವರಃ ಪ್ರತಿದಿನಂ
ಭೂಯಾತ್ಸಹು ಶ್ರೇಯಸೇ

ಡಾ॥ ಕೆ. ಸರ್ವೋತ್ತಮನ್

ಅನ್ನಮಯ್ಯ ಶ್ರೀ ಪಾದರಾಜರು ಸಮಕಾಲೀನರಾದ್ದರಿಂದ ಪರಸ್ಪರ ಪರಿಚಿತರೋ ಇಲ್ಲವೋ ಆಧಾರ ಪೂರ್ವಕವಾಗಿ ಹೇಳಲಾಗದು. ಅನ್ನಮಯ್ಯ ಜೀವಿತ ಚರಿತ್ರೆಯನ್ನು ರಚಿಸಿದ ಕಾಲ್ಲಪಾಕ ಚಿನ್ನನ್ನ ಅನ್ನಮಯ್ಯ ಪುರಂದರರ ಸಮಾಗಮವನ್ನು ಉಲ್ಲೇಖಮಾಡಿದ್ದಾನೆ. ಶ್ರೀ ಪಾದರಾಜರನ್ನು ಕುರಿತು ಹೇಳಿಲ್ಲ. ಬಹುಶಃ ಚಿನ್ನನ್ನನಿಗೆ ಈ ಸಂಘಟನೆ ತಿಳಿಯಲಿಕ್ಕೆ ಅವಕಾಶ ಇಲ್ಲ ಅಥವಾ ಪ್ರಧಾನ ಸನ್ನಿವೇಶಗಳನ್ನು ಹೇಳುವುದೇ ಚಿನ್ನನ್ನನ ಉದ್ದೇಶವಾಗಿರಬಹುದು.



ಶ್ರೀ ಪಾದರಾಜರು, ಅನ್ನಮಾಚಾರ್ಯರು ಇಬ್ಬರೂ ಸ್ವಭಾಷೆಯಲ್ಲಿ ಸಂಕೀರ್ತನೆಗಳನ್ನು ಹಾಡುವುದಕ್ಕೆ ಶಿವಶರಣರ ವಚನಗಳ ಪ್ರಭಾವ. ವೈಷ್ಣವಾಲಯಗಳಲ್ಲಿ ನಾಲಾಯಿರ ದಿವ್ಯ ಪ್ರಬಂಧ ಪಾರಾಯಣ – ಪ್ರಧಾನ ಕಾರಣಗಳಾಗಿ ಪ್ರೇರೇಪಕ ಶಕ್ತಿಗಳಾಗಿದ್ದವೆಂದು ಹೇಳಬಹುದು. ಶ್ರೀ ಪಾದರಾಜರು ಮಾಧ್ವ ಮತವನ್ನು ಪ್ರಚಾರ ಮಾಡಿದ ಯತೀಂದ್ರರು ಅನ್ನಮಾಚಾರ್ಯರು ಜನ್ಮತಃ ಸ್ಮಾರ್ತರಾಗಿದ್ದರೂ ಘನ ವಿಷ್ಣುವು ಮಾಡಿದ ಪಂಚ ಸಂಸ್ಕಾರಗಳಿಂದ ವೈಷ್ಣವರಾಗಿ ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಸಂಕೀರ್ತನಾ ರೂಪವಾಗಿ ಪ್ರಚಾರ ಮಾಡಿದವರು. ಶ್ರೀ ಪಾದರಾಜರ ಬೃಂದಾವನವನ್ನು ಈಗಲೂ ಭಕ್ತರು ದರ್ಶಿಸಿ ಕೊಂಡಾಡುವರು. ಆದರೆ ಅನ್ನಮಯ್ಯ ಎಲ್ಲಿ ತಮ್ಮ ಕಡೆಗಾಲವನ್ನು ನೂಕಿದರು ಎಂಬುದು ತಿಳಿಯದು.

ಶ್ರೀಪಾದರಾಜರು ರಂಗವಿಠಲಾಂಕಿತವಾಗಿ ಕೀರ್ತನೆಗಳು ಹಾಡಿದರೆ, ಅನ್ನಮಯ್ಯ ವೆಂಕಟೇಶ್ವರನ ಅಂಕಿತದಲ್ಲಿ ಹಾಡಿದರು. ಶ್ರೀಪಾದರಾಜರಲ್ಲಿ 'ವೆಂಕಟೇಶ ಕೃತಿಗಳು' ಕಾಣುವಂತೆ ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಶ್ರೀರಂಗನ ಹಾಡುಗಳು ಕಾಣುತ್ತವೆ.

ಬ್ರಹ್ಮ ಪೂಜಿಂಚೆ ರಘುಪತಿ ವಿಭೀಷಣುನಿಕಿಚ್ಚೆ
ಬ್ರಹ್ಮಣ್ಯುಡೀ ರಂಗಪತಿ ಗೊಲುವರೋ
ಕಾವೇರೀ ಮಧ್ಯ ರಂಗ ಕ್ಷೇತ್ರಮುಲ್ಲದಿವೋ

ಎಂದು ಶ್ರೀರಂಗವನ್ನು ನೋಡಿ ಮೈಮರೆತು ಹಾಡಿದ್ದಾರೆ ಅನ್ನಮಯ್ಯ. ಶ್ರೀಪಾದರಾಜರು

ಜೂನ್ ತಿಂಗಳಲ್ಲಿ ಶ್ರೀಪಾದರಾಜರ ಆರಾಧನೆ. ಅನ್ನಮಯ್ಯ ನಂತೆಯೇ ಶ್ರೀಪಾದರಾಜರೂ ಸಹ ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತರು. ತಮ್ಮೊಂದಿಗೆ ಪರಿಸರವನ್ನೂ ಭಗವತ್ ಪ್ರೀತಿಯ ಸುಗಂಧಮಯವನ್ನಾಗಿ ಮಾಡುವುದರಲ್ಲಿ ಶ್ರಮಿಸಿದರು – ಸಫಲರಾದರು. ವಾಗ್ಗೇಯಕಾರರಲ್ಲಿ ಹಿರಿಯರಾದ ಶ್ರೀಪಾದರಾಜರು ಹಾಗೂ ಅನ್ನಮಯ್ಯ – ಇಬ್ಬರನ್ನೂ ಗೌರವಿಸುವ ಈ ಲೇಖನ ರಾಜರ ಆರಾಧನೆಯಲ್ಲಿ ಸಪ್ತಗಿರಿ ಪ್ರಕಟಪಡಿಸುವ ನೆನಪಿನ ಕಾಣಿಕೆ. – ಸಂ॥

ರಂಗೇಶನು ದಕ್ಷಿಣಾಧೀಶನೆಂದು ಸಂಬೋಧಿಸಿ ಹಾಡಿದ ಕೀರ್ತನೆ ಬಹಳ ಪ್ರಸಿದ್ಧವಾದದ್ದು –

ರಕ್ಷಿಸೆಮಾಂ ರಂಗೇಶ ರವಿಕೋಟಿ ಸಂಕಾಶ
ಪಕ್ಷಿವಾಹನ ಶ್ರೀಶ ಭಕ್ತಗುಣ ಕೋಶ
ಅಕ್ಷರಾ ಪಿಪೀಲಿಕಾಂತ ಸಂ
ರಕ್ಷಕಾಮಯ ಹರಣ ಸರ್ವ
ಲಕ್ಷಣ ಪರಿಪೂರ್ಣ ಪರಮೇಶ

ದಾಸ ಸಾಹಿತ್ಯದಲ್ಲಿ ಪ್ರಥಮತಃ ಶ್ರೀ ವೆಂಕಟೇಶ್ವರನ್ನು ಕೀರ್ತಿಸಿದ ದಾಸರು ಶ್ರೀಪಾದ ರಾಜರೇ ಅವುಗಳಲ್ಲಿ,

'ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿವಾಸ ಶ್ರೀವರದ ವೆಂಕಟೇಶ '

'ಹರೇ ವೆಂಕಟಶೈಲ ವಲ್ಲಭ
ಪೊರೆಯ ಬೇಕು ಎನ್ನ '

ಇದೇ ಪ್ರಕಾರ ಅಂಧ್ರ ವಾಗ್ಗೇಯಕಾರರಲ್ಲಿ ವಿಠಲನನ್ನು ಕೀರ್ತಿಸಿದವರಲ್ಲಿ ಅನ್ನಮಾಚಾರ್ಯ ಆದ್ಯ. ಇವಕ್ಕೆ ವಿಜಯನಗರ ಅರಸರು, ಕನ್ನಡ ಸಂಸ್ಕೃತಿ ಪ್ರಧಾನ ಕಾರಣಗಳು. ಇವರ ಕೃತಿಗಳಲ್ಲಿ ನರಸಿಂಹನ ಕೀರ್ತನೆಗಳು ಜಾಸ್ತಿ. ಮುಳು ಬಾಗಿಲು ವಾಸ ಶ್ರೀ ಪಾದರಾಜರಿಗೆ, ಅಹೋಬಲ ವಾಸ ಅನ್ನಮಾಚಾರ್ಯರಿಗೆ ಇರುವುದು ಇದಕ್ಕೆ ಕಾರಣವಾಗಿರ ಬಹುದು.

ಇಹಲೋಕ ಭೋಗಗಳನ್ನು ಇವರಿಬ್ಬರೂ ತೃಣೀಕರಿಸಿದ್ದಾರೆ.

'ಪರರ ಬಾಗಿಲು ಕಾಯಿದು ಹೋಯಿತೀ
ಸಂಸಾರ '

ಆಗ ಬೇಕು ರಾಜ್ಯ ಭೋಗಗಳೆನೆಂದು
ಈಗ ನಾವು ಬೇಡಬಂದ.ದಿಲ್ಲ

– ಎನ್ನುವುದು ರಾಯರ ಬೇಡಿಕೆ

ಮಾನಗ ಶ್ರೀಪತಿಕೆ ಮ್ರೊಕ್ಕಿನ ಚೇತುಲು
ಅನರುಹುಲಕು ದಂಡಮಾ

ಎಂದು ಅರ್ಹತೆಯಿಲ್ಲದವರಿಗೆ ನಮಸ್ಕಾರ ಮಾಡುವುದನ್ನು ಅನ್ನಮಯ್ಯ ನಿಂದಿಸಿದ್ದಾರೆ ಇದೇ ಪ್ರಕಾರ ಕಲಿಕಾಲ ನಿಂದೆ ಇವರ ರಚನೆಗಳಲ್ಲಿ ಹಲವಾರು ಕಾಣುತ್ತವೆ.

ರಾಮಾಯಣ, ಮಹಾಭಾರತ ಹಾಗೂ ಭಾಗವತ ಹರಿವಂಶ ಭಕ್ತಿಮತ ಪ್ರಚಾರಕ್ಕೆ ಆಧಾರ ಗ್ರಂಥಗಳು. ಇವುಗಳ ಪರಿಚಯ ಭಾರತೀಯರಿಗೆ ಉಂಟು. ಆದ್ದರಿಂದ ವೈಷ್ಣವ ಮತ ಪ್ರಚಾರಕ್ಕೆ ಸಿದ್ಧವಾದವರು, ಈ ಗ್ರಂಥಗಳಿಂದ ಹಲವಾರು ಕಥೆಗಳನ್ನು ಉದಾಹರಿಸಿದ್ದಾರೆ. ಪ್ರತ್ಯೇಕವಾಗಿ ಹರಿವಂಶ ಕಥೆಗಳು, ಅಂಶಗಳನ್ನು ಇವರು ರಚನೆಯಲ್ಲಿ ಬಳಸಿಕೊಂಡಿದ್ದಾರೆ. ಭಗವಂತನು ಹಿರಿಯನೇ, ಅಲ್ಲ ಭಕ್ತನು ದೊಡ್ಡವನೇ ಎನ್ನುವುದು ಕುತೂಹಲವಾದ ಪ್ರಶ್ನೆ. ಇದನ್ನೇ ಶ್ರೀ ಪಾದರಾಜರು

'ನೀನೇ ಬಲ್ಲಿದನೋ ರಂಗಾ
ನಿನ್ನ ದಾಸರು ಬಲ್ಲಿದರೋ '

ಎಂದು ಕೇಳುತ್ತಾರೆ.

ಇದೇ ಭಾವವನ್ನು ಅನ್ನಮಯ್ಯ 'ಇತಡೇ ಅತಡು ಕಾಬೋಲು ' ಕೀರ್ತನೆಯಲ್ಲಿ ಹಾಡಿದ್ದಾರೆ.

'ಸೇತು ನಿರ್ಮಾಣಮಾಡಿ
ರಾಮನು ಲಂಕೆ ಸೇರಿದ
ನಾಮ ಸ್ಮರಣೆ ಮಾಡಿ ಹನುಮ ಲಂಕೆ ಸೇರಿದ
ಭಯಂಕರ ಸಮರದಲ್ಲಿ ರಾವಣನ
ಗರ್ವವನ್ನು ರಾಮ ಅಣಸಿದ
ಸುಲಭವಾಗಿ ಮೈರಾವಣನನ್ನು
ಹನುಮ ಖಂಡಿಸಿದ '

ಭಕ್ತಿ ವಿಭೇದಗಳಲ್ಲಿ ವಾತ್ಸಲ್ಯ ಭಕ್ತಿ ಒಂದು. ದಾಸರ ಸಾಹಿತ್ಯದಲ್ಲಿ ಶ್ರೀಪಾದರಾಜರು ವಾತ್ಸಲ್ಯಕ್ಕೆ ಪ್ರಾಧಾನ್ಯ ಕೊಟ್ಟು ಬರೆದ ಕೀರ್ತನೆಗಳಲ್ಲಿ

ಗೊಲ್ಲತಿಯರೆಲ್ಲ ಕೂಡಿ ಎನ್ನ ಮೇಲೆ
ಇಲ್ಲದ ಸುದ್ದಿ ಪುಟ್ಟಿಸಿ
ಕಳ್ಳನೆಂದು ದೂರುತಾರೆ ಎನ್ನ
ಕೊಲ್ಲಬೇಕೆಂಬ ಬಗೆಯ

ಎನ್ನುವ ವಾದಗಳಲ್ಲಿ ಕೃಷ್ಣನ ಅಮಾಯಕ ಪ್ರವೃತ್ತಿ ವ್ಯಕ್ತವಾಗುತ್ತದೆ. ಅನ್ನಮಯ್ಯ 'ಕಾನರಟೆ ಪೆಂಚರಟೆ ' ಕೀರ್ತನೆಯಲ್ಲಿ ಯಶೋದೆ ವಾತ್ಸಲ್ಯವನ್ನು ಪ್ರದರ್ಶಿದ್ದಾರೆ.

ನಿಮಗೇ ಮಕ್ಕಳಿಲ್ಲವೋ ನೀವು ಹಡೆಯಲಿಲ್ಲವೊ, ಹೊರಗೆ ಎಲ್ಲರ ನೋಟದಲ್ಲಿ ಕಾಣುವಂತೆ ಹಾಲು, ಬೆಣ್ಣೆಯಿಟ್ಟರೆ ಹುಡುಗರು ಆಶಿಪಡುವುದು ಸಹಜವಲ್ಲವೋ. ಜಾಗ್ರುತೆ ಪಡುವುದು ನಿಮ್ಮ ಕರ್ತವ್ಯ ಎಂದು ಹೆದರಿಸುತ್ತಾಳೆ ಯಶೋದೆ.

'ಸವಿಗೆ ಸವಿ ಸಂಸಾರ ' ವೆಂದು ಅನ್ನಮಯ್ಯ ಹೇಳಿದರೆ ಆ ಸಂಸಾರ ಸವಿಯಾಗಿ ಇರಲಿಕ್ಕೆ ಬೇಕಾದ ಅಂಗಗಳನ್ನು ಶ್ರೀಪಾದರಾಜರು ವಿವರಿಸಿದ್ದಾರೆ.

ಸತಿ ಅನುಕೂಲ ಬೇಕು
ಸುತನಲ್ಲಿ ಗುಣ ಬೇಕು
ಮತಿವಂತನಾಗಬೇಕು
ಮತ ಒಂದಾಗಿರಬೇಕು

ಅನ್ನಮಯ್ಯ ಗೃಹಸ್ಥರಾಗಿದ್ದರಿಂದ, ಶ್ರೀಪಾದರ ಸನ್ಯಾಸಿಗಳಾಗಿದ್ದರಿಂದ ಬೋಧನೆಯಲ್ಲಿ ಕೆಲವು ವ್ಯತ್ಯಯ ಗೋಚರವಾಗುತ್ತದೆ. ಉದಾಹರಣೆಗೆ ಅನ್ನಮಯ್ಯ ;

ಸಂಸಾರವೆ ಮೇಲು ಸಕಲ ಜನುಲಕುನು
ಕಂಸಾಂತಕುನಿ ಭಕ್ತಿ ಕಲಿಗಿತೇ ಮೇಲು

ಎಂದು ಸಂಸಾರ ಮೇಲೆಂದು ಹೇಳುತ್ತಾರೆ ಆದರೆ ರಾಯರು

'ಅಕಟಕಟ ಸಂಸಾರವನು ಮೆಚ್ಚಿಕೆಡಬ್ಯಾಡ
ವಿಕಟದಲಿ ಮಾನವರು ಕೆಟ್ಟರೆಲ್ಲರು ನಿಜ '

ಎಂದು ಕಾರಣಗಳು ಹೇಳುತ್ತಾರೆ.

ಕೆಲವು ಕೀರ್ತನೆಗಳ ಆರೋಹಣ ಒಂದೇ ರೀತಿಯಾಗಿ ಇದೆ.

'ಇಟ್ಹಾಂಗೆ ಇರುವೆನೋ ಹರಿಯೇ ಎನ್ನ ದೊರೆಯೇ ಎನ್ನುವ ಪಾದ' 'ಎಟ್ಟಿವಲಸಿನಾ ಚೇಯು ' ಎಂಬ ಪಾದಕ್ಕೆ ಸರಿಯಾಗಿದೆ

ಒಂದು ಸಿದ್ಧಾಂತವನ್ನು ಪ್ರಚಾರ ಮಾಡುವ ಕಾರ್ಯಕರ್ತರು ಸಾಮಾನ್ಯ ಜನರು ಮೆಚ್ಚುವ ಬಾಣಿಗಳನ್ನು ಅನುಸರಿಸುವುದು ಸಹಜ ಅದೇ ರೀತಿಯಲ್ಲಿ ಶ್ರೀಪಾದರಾಜರು, ಅನ್ನಮಾಚಾರ್ಯರು ಜಾನಪದ ಗೇಯ ಗತಿಗಳನ್ನು ಅನುಸರಿಸಿದ್ದಾರೆ. ಸಾಮಾನ್ಯ ಜನರು ಮೆಚ್ಚುವ ಭಾಷೆಯಲ್ಲಿ ಮತ ಪ್ರಚಾರ ಮಾಡಿದ್ದಾರೆ. ಇವರ ಕೃತಿಗಳಲ್ಲಿ ಸುಳಾದಿಗಳು, ಮಂಗಳ ಗೇಯಗಳು, ಧವಳ ಗೀತೆಗಳು ಕಾಣಿಸುತ್ತವೆ. ಶಿಶು ಗೀತೆಗಳಲ್ಲಿ ಒಂದು-

ಅಬ್ಬುರಂಪು ಶಿಶುವು
ಆಕು ಮಿಡಿ ಶಿಶುವು
ದೊಬ್ಬುಡು ರೋಲಿ ಶಿಶುವು
ತ್ರುಪ್ಪಿ ತ್ರುಪ್ಪಿ ತ್ರುಪ್ಪಿ

ಇದೇ ರೀತಿಯಲ್ಲಿ ಶ್ರೀಪಾದರಾಯರ ಜೋಗುಳ ಹಾಡು ನೋಡಿ

ಜಗವನು ಹೊಟ್ಟೆಯೊಳಿಂಬಿಟ್ಟೆ, ತ್ರುಪ್ಪಿ
ಜಗವೆಲ್ಲ ನಿರ್ಮಾಣ ಮಾಡಿದೆ ತ್ರುಪ್ಪಿ
ನಿಗಮ ಗೋಚರ ನಿತ್ಯಾನಂದನೆ ತ್ರುಪ್ಪಿ
ಮಗುವೆಂದು ನಾವ್ ತೂಗಬಲ್ಲೆವೆ ತ್ರುಪ್ಪಿ

ಶ್ರೀಪಾದರಾಜರು, ಅನ್ನಮಾಚಾರ್ಯರು ಕನ್ನಡಾಂಧ್ರ ಸಾಹಿತ್ಯಕ್ಕೆ ನೀಡಿದ ಸೇವೆ ಅಮೂಲ್ಯವೆಂದು ಹೇಳಬೇಕು.



# ವಿಜಯದಾಸರ ಸುಳಾದಿಗಳು

ಶ್ರೀ ಪುರಂದರ ದಾಸರ ತರುವಾಯ ಸ್ವಸ್ಥವಾಗಿದ್ದ ಹರಿದಾಸಸಾಹಿತ್ಯ, ಅವರ ಪ್ರೇರಣೆಯಿಂದಲೇ ಕ್ರಿ. ಶ. ಹದಿನೆಂಟನೆಯ ಶತಮಾನದಲ್ಲಿ ಶ್ರೀ ವಿಜಯದಾಸರಿಂದ ಪುನರುತ್ಥಾನವಾಯಿತು. ರಾಯಚೂರಿನ ಒಳಯಿರುವ ಚೀಕಲಪರವಿಯ ಶ್ರೀನಿವಾಸಪ್ಪ ಕೂಸಮ್ಮನವರ ಸುಪುತ್ರ ದಾಸಪ್ಪ ಕ್ರಿ. ಶ. 1712ರಲ್ಲಿ 'ವಿಜಯವಿಠಲ' ಎಂಬ ಅಂಕಿತವನ್ನು ಸ್ವಪ್ನದಲ್ಲಿ ಶ್ರೀ ಪುರಂದರ ದಾಸರ ಕೃಪೆಯಿಂದ ಪಡೆದು, ಜ್ಞಾನ ಭಕ್ತಿ ವೈರಾಗ್ಯ ಭರಿತ ಜೀವನ ನಡೆಸಿ, ಕೃತಿಗಳನ್ನು ರಚಿಸಿ ವಿಜಯದಾಸರೆಂದು ಪ್ರಸಿದ್ಧರಾದರು. ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ಇವರು ರಚಿಸಿದಷ್ಟು ಸುಳಾದಿಗಳನ್ನು ಮತ್ತೊಬ್ಬರು ರಚಿಸಿಲ್ಲ. ಅಲ್ಲದೆ ದೊರೆತಿರುವ ಸಾಹಿತ್ಯವನ್ನು ಸಮೀಕ್ಷಿಸಿದರೆ ವಿಜಯದಾಸರ ಕೃತಿಗಳು ಲಭ್ಯವಾಗಿರುವಷ್ಟು ಅನ್ಯ ಹರಿದಾಸರ ದೊರೆತಿರುವ ಕೃತಿಗಳ ಸಂಖ್ಯೆ ಒಂದು ಸಾವಿರವನ್ನೂ ತಲುಪಿಲ್ಲ; ಆದರೆ 1201 ವಿಜಯದಾಸರ ರಚನೆಗಳು ದೊರೆತಿದ್ದು ಇದರಲ್ಲಿ 580 ಸುಳಾದಿಗಳು, 550 ಕೀರ್ತನೆಗಳು ಮತ್ತು 71 ಉಗಾಭೋಗಗಳು ಸಮಾವೇಶಗೊಂಡಿವೆ. ಈ ಬೆರಗುಗೊಳಿಸುವ ಸಾಹಿತ್ಯರಾಶಿಯಲ್ಲಿ ಸುಳಾದಿಗಳು ಗುಣ ಮತ್ತು ಗಾತ್ರಗಳೆರಡೂ ದೃಷ್ಟಿಗಳಿಂದಲೂ ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ಮಿಗಿಲಾದ ಸ್ಥಾನವನ್ನು ಪಡೆದಿವೆ. ಹರಿದಾಸ ಸಾಹಿತ್ಯೋದಯದೊಡನೆ ಕನ್ನಡದಲ್ಲಿ ಸುಳಾದಿ ಸಾಹಿತ್ಯ ರಚನೆಯ ಆರಂಭವೂ ಆಯಿತಾದರೂ ಈ ಗೇಯರೂಪದಲ್ಲಿ ಸಾಹಿತ್ಯ ನಿರ್ಮಿಸುವ ಕಾರ್ಯವನ್ನು ವಿಶೇಷವಾಗಿ ಬಳಕೆಗೆ ತಂದ ಏಕೈಕ ವ್ಯಕ್ತಿ ಎಂದರೆ ಶ್ರೀವಿಜಯದಾಸರು. ಇವರು ತಮ್ಮ ತರುವಾಯ ಕರ್ನಾಟಕದಲ್ಲಿ ಹರಿದಾಸರ ಪರಂಪರೆ ತ್ರುಟಿತವಾಗದೆ ಮುಂದುವರಿಯಲೆಂಬ ಉದ್ದೇಶದಿಂದ ಅನೇಕ ಅಪೇಕ್ಷಿತ ಅರ್ಹ ಜನರಿಗೆ ದಾಸದೀಕ್ಷೆಯನ್ನು ಕೊಟ್ಟರು; ಆ ಶಿಷ್ಯ ಪರಂಪರೆಯಲ್ಲಿ ಗೋಪಾಲದಾಸರು, ಮೋಹನದಾಸರು, ವೇಣುಗೋಪಾಲದಾಸರು, ಆನಂದದಾಸರು ಮೊದಲಾದ ಶಿಷ್ಯರ ಪರಂಪರೆಯೂ ಮುಂದುವರೆಯಿತು ಮತ್ತು ಹರಿದಾಸ ಸಾಹಿತ್ಯ ನಿರ್ಮಾಣವೂ ಆಯಿತು. ಆದರೆ ವಿಜಯದಾಸರ ತರುವಾಯ ಮುಂದುವರಿದ ಹರಿದಾಸರ್ಯಾರೂ ವಿಜಯದಾಸರಂತೆ ವಿಪುಲವಾಗಿ ಸುಳಾದಿಗಳನ್ನು ರಚಿಸಲಿಲ್ಲ. ಆದುದರಿಂದ ವಿಜಯದಾಸರನ್ನು 'ಸುಳಾದಿದಾಸ'ರೆಂದೇ ಕರೆಯಬಹುದು.

'ಸುಳಾದಿ' ಎಂಬುದು ಸಂಗೀತ ಶಾಸ್ತ್ರದಲ್ಲಿ ಒಂದು ಪಾರಿಭಾಷಿಕ ಶಬ್ದ. 'ಸುಡಾದಿ' ಎಂದು ವೆಂಕಟಮಖಿ ತನ್ನ ಚತುರ್ದಂಡಿ ಪ್ರಕಾಶಿಕಾ ಗ್ರಂಥದಲ್ಲಿ ಪ್ರಯೋಗಿಸಿದ್ದಾನೆ ಇದೇ ಅನಂತರ 'ಸುಳಾದಿ' ಆಯಿತು. 'ಸುಳಾದಿ ಒಂದು ತಾಳಮಾಲಿಕೆ. ಒಂದು ನಿರ್ದಿಷ್ಟ ರಾಗವನ್ನು ಬಳಸಿ, ರಚನೆಯನ್ನು ಏಳು ವಿಭಾಗಗಳಾಗಿ ವಿಂಗಡಿಸಿ ಸಪ್ತತಾಳಗಳನ್ನು ಅವುಗಳಿಗೆ ಅಳವಡಿಸಿರುವುದು ಇದರ ವೈಶಿಷ್ಟ್ಯ. ವೆಂಕಟಮಖಿಯ ಪ್ರಕಾರ ಧ್ರುವ, ಮಠ್ಯ, ರೂಪಕ, ಝಂಪೆ, ತ್ರಿಪುಟ, ಅಟ್ಟ ಮತ್ತು ಏಕ ಎಂಬ ಏಳು ತಾಳಗಳಲ್ಲಿಯೂ ಸಾಹಿತ್ಯದ ಸಾಲುಗಳ ಸಂಖ್ಯೆ ಇಷ್ಟೇ ಇರಬೇಕೆಂದು ನಿಯಮವಿಲ್ಲ. ಸುಳಾದಿಯ ಕೊನೆಯಲ್ಲಿ ಎರಡುಸಾಲುಗಳ ಪದ್ಯವಿರುತ್ತದೆ. ಇದನ್ನು ಜತೆ, ಜೊತೆ ಅಥವಾ ಜತ್ತೆ ಎಂದು ಸೂಚಿಸುವ ರೂಢಿ ಇದೆ. ಸುಳಾದಿಗಳ ರಚನೆಯನ್ನು ಮೇಲೆ ಹೇಳಿರುವ ಸಂಗೀತ ಶಾಸ್ತ್ರಜ್ಞರ ಅಭಿಪ್ರಾಯದೊಂದಿಗೆ ಹೋಲಿಸಿದಾಗ ಕೆಲವು ವ್ಯತ್ಯಾಸಗಳನ್ನು ಗುರುತಿಸಬಹುದಾಗುತ್ತದೆ.

ಸಪ್ತತಾಳಗಳಿದ್ದು ಒಂದು ರಾಗದಲ್ಲಿ ಹಾಡುವ ಸಾಹಿತ್ಯವನ್ನು ಎಲ್ಲ ಸುಳಾದಿಗಳಲ್ಲಿ ಕಾಣಲಾಗುವುದಿಲ್ಲ, ಕೆಲವು ಸುಳಾದಿಗಳಲ್ಲಿ ಕೇವಲ ಐದು ತಾಳಗಳಿರುವುದು ಕಂಡು ಬಂದಿದೆ. ವಿಜಯದಾಸರ ಪ್ರಾರ್ಥನಾ ಸುಳಾದಿಗಳು [ (ಸಂ) ಗೋ. ಹನುಮಂತರಾವ್ ನೋಡಿ ಸುಳಾದಿ ಸಂಖ್ಯೆ 78, 79, 80, 81, 82, ಇತ್ಯಾದಿ ] ಎರಡು ತಾಳಗಳನ್ನು ಕೈ ಬಿಡುವಾಗ ಹರಿದಾಸರು ಆಯಾ ಸಾಹಿತ್ಯಕ್ಕೆ ಅನುಕೂಲವಾದ ತಾಳಗಳನ್ನಿಟ್ಟುಕೊಂಡು ಉಳಿದ ಎರಡು ತಾಳಗಳನ್ನು ಬಿಟ್ಟಿರುವಂತೆ ತೋರುತ್ತದೆ. ವಿಜಯದಾಸರ ಸುಳಾದಿಗಳಲ್ಲಿ ಏಕತಾಳದ ಬದಲಾಗಿ ಆದಿತಾಳವನ್ನು ಉಪಯೋಗಿಸಿರುವುದು ಹೆಚ್ಚು ಸುಳಾದಿಗಳಲ್ಲಿ ಕಂಡು ಬರುತ್ತದೆ. ಧ್ರುವ ತಾಳದಿಂದ ಅಟ್ಟ ತಾಳದವರಿಗೆ ಸಮಾವೇಶಗೊಳ್ಳುವ ತಾಳಗಳು ಚತುರ್ದಂಡಿ ಪ್ರಕಾಶಿಕಾ ಗ್ರಂಥದಲ್ಲಿ ಹೇಳಿದ ಕ್ರಮದಲ್ಲಿ ವಿಜಯದಾಸರು ಬಳಸಿದಂತೆ ತೋರುವುದಿಲ್ಲ. ತಾಳಗಳನ್ನು ಬಳಸಿರುವ ಕ್ರಮದಲ್ಲಿ ವ್ಯತ್ಯಾಸವಾಗಿರುವುದನ್ನು ಕಾಣುತ್ತೇವೆ. ಸುಳಾದಿಗಳ ಎಲ್ಲ ಸಾಲುಗಳಲ್ಲಿಯೂ ಆದಿಪ್ರಾಸನಿಯತವಾಗಿದೆ. ಆದರೆ ತಾಳಗಳು ಬದಲಾದಂತೆ ಪ್ರಾಸದ ಅಕ್ಷರಗಳೂ ಬದಲಾಗುತ್ತವೆ. ಶ್ರೀಪಾದರಾಜರು ರಚಿಸಿರುವ ಕೆಲವು ಸುಳಾದಿಗಳಲ್ಲಿ ಏಳು ತಾಳಗಳಿಗೂ ಏಳು ವಿವಿಧ ರಾಗಗಳು ನಿರ್ದೇಶಿಸಲಾಗಿವೆ. ಇದು ಅವರ ವಿಶಿಷ್ಟ ಪ್ರಯೋಗವೆನ್ನಬೇಕು.

ಸುಳು+ಆದಿ – ಸುಳ್ಳಾದಿ– ಸುಳಾದಿ ಎಂದು ಇದರ ನಿಷ್ಪತ್ತಿಯನ್ನು ಹೇಳುವುದುಂಟು. ಶ್ರೀ ಹರಿಯನ್ನು ಸುಲಭವಾಗಿ ಒಲಿಸಿಕೊಳ್ಳುವ ಹಾದಿಯನ್ನು ಸುಳಾದಿಗಳ ಮೂಲಕ ತಿಳಿಯಬಹುದೆನ್ನುವುದು ಇದರ ಅರ್ಥ. 'ಸುಳಿದರೆ ಸುಳಾದಿ' ಎಂಬ ಮಾತು ಹರಿದಾಸರ ವಲಯದಲ್ಲಿದೆ. ಪರಮಾತ್ಮನ ಸಾಕ್ಷಾತ್ಕಾರವಾದ ಮೇಲೆ ರಚಿತವಾಗುವ ಕೃತಿ ಎಂದು ಇದರ ಅರ್ಥ.

ಸುಳಾದಿಗಳಲ್ಲಿನ ವಿಷಯ: ಉಗಾಭೋಗಗಳಲ್ಲಿ ಸಾಮಾನ್ಯವಾಗಿ ಪ್ರಾರ್ಥನಾರೂಪ ಸಾಹಿತ್ಯವಿರುತ್ತದೆ; ಕೀರ್ತನೆಗಳಲ್ಲಿ ಪರಮಾತ್ಮನ ಹೊಗಳಿಕೆ, ಭಕ್ತಿಗಾಗಿ ಯಾಚನೆ, ಸಾಮಾನ್ಯರಿಗೆ ಉಪದೇಶ, ಇತ್ಯಾದಿ ವಿಷಯಗಳು ಹೆಚ್ಚಾಗಿರುತ್ತವೆ. ಆದರೆ ಸುಳಾದಿಗಳಲ್ಲಿ ಪ್ರಾರ್ಥನಾರೂಪ ಸಾಹಿತ್ಯವಿದ್ದರೂ ತಾತ್ತ್ವಿಕ ಮೌಲ್ಯವುಳ್ಳ ರಚನೆಗಳೇ ಹೆಚ್ಚು. ಸುಳಾದಿಗಳ ಧಾಟಿ ಪ್ರೌಢ. ಜಟಿಲವಾದ ತತ್ತ್ವಗಳನ್ನು ವಿವರಿಸುವ ಕ್ರಮ ಇದರ ವೈಶಿಷ್ಟ್ಯ. ಶ್ರೀಮದಾನಂದ ತೀರ್ಥರು ಪ್ರತಿಪಾದಿಸಿದ ದ್ವೈತ ಸಿದ್ಧಾಂತವನ್ನು ವಿವರವಾಗಿ ತಿಳಿಸುವ ದೃಷ್ಟಿ ಹೆಚ್ಚಾಗಿ ಕಂಡುಬರುತ್ತದೆ. ಸಿದ್ಧಾಂತ ಪ್ರಸಾರವೇ ಸುಳಾದಿಗಳ ಪ್ರಮುಖ

ಡಾ॥ ಕೆ. ಗೋಕುಲನಾಥ್

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ,

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರು ತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ದಾಟಿ ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು ಸೋಮ, ಮಂಗಳ, ಬುಧ ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಪರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ದೃಷ್ಟಿಯಾಗಿರುವುದನ್ನು ವಿಜಯದಾಸರ ಸುಳಾದಿಗಳಲ್ಲಿ ಗುರುತಿಸಬಹುದು. ಆದುದರಿಂದ ಇಲ್ಲಿ ವಿಷಯ ಗಹನ ಮತ್ತು ಗಂಭೀರವಾಗಿದ್ದು ಒಟ್ಟಿನಲ್ಲಿ ಸುಳಾದಿಗಳು ಪ್ರೌಢಿಮೆಯನ್ನು ಪಡೆದಿರುತ್ತವೆ. ವಿಜಯದಾಸರ ಸುಳಾದಿಗಳಲ್ಲಿ ಮಧ್ವಸಿದ್ಧಾಂತದ ಎಲ್ಲ ಪ್ರಮೇಯಗಳು ಸಂಗ್ರಹವಾಗಿವೆ. ಪ್ರಪಂಚದ ಸೃಷ್ಟಿ ಹೇಗಾಯಿತೆಂಬ ವಿಚಾರವನ್ನು ಸಿದ್ಧಾಂತಿಕವಾಗಿ ಹೇಗೆ ವಿವರಿಸಲಾಗಿದೆಯೋ ಅಲ್ಲಿಂದ ಪ್ರಾರಂಭಿಸಿ ಪ್ರಪಂಚದ ಲಯಕಾಲದ ವರೆಗಿನ ಮುಖ್ಯವಾದ ಜೀವ–ಜಡ–ಪರಮಾತ್ಮರ ವಿಷಯಕ ವಿಚಾರಗಳು ಇಲ್ಲಿ ಅಡಕಗೊಂಡಿವೆ ಎನ್ನಬಹುದು. ಶ್ರೀಹರಿ ಸರ್ವೋತ್ತಮತ್ವದ ಪ್ರತಿಪಾದನೆ, ಅವನ ಅವತಾರಗಳ ವೈಶಿಷ್ಟ್ಯ– ಗುಣಗಳು, ಅವನ ಸೃಷ್ಟಿ – ಸ್ಥಿತಿ–ಲಯ – ನಿಯಮನ–ಜ್ಞಾನ – ಅಜ್ಞಾನ – ಬಂಧ ಮೋಕ್ಷವನ್ನುಂಟು ಮಾಡುವ ಕ್ರಮ, ಭಕ್ತಿಪರಾಧೀನತೆ ಚೇತನಾ ಚೇತನ ವಸ್ತುಗಳಲ್ಲಿ ವ್ಯಾಪ್ತಿತ್ವ, ಪ್ರೇರಕತ್ವ, ವಿಭೂತಿರೂಪಗಳು, ಕರುಣೆ, ಚಲಾಚಲ ಪ್ರತಿಮೆಗಳಲ್ಲಿ ಅವನ ಸನ್ನಿಧಾನ ವಿಚಾರ, ಬಿಂಬ ಕ್ರಿಯೆ, ಜೀವರ ಸಾಧನೆಗೆ ಅವನು ತೋರುವ ಮಾರ್ಗ, ಇತ್ಯಾದಿ ವಿಚಾರಗಳು ಅನೇಕ ಸುಳಾದಿಗಳಲ್ಲಿ ಚದುರಿವೆ ಹೀಗೆ ಪರಮಾತ್ಮನ ಗುಣಗಳನ್ನು ವಿವರಿಸಿರುವುದರೊಡನೆ ಜೀವರ ಸಾಧನೆಯ ಕ್ರಮ, ಭಕ್ತಿಯನ್ನು ಬೆಳೆಸಿಕೊಳ್ಳಬೇಕಾದ ರೀತಿ, ನಿತ್ಯ ನೈಮಿತ್ತಿಕ ಕರ್ಮಗಳಾಚರಣೆಯ ಬಗೆ, ಸಾಧನೆಯ ಮಾರ್ಗಕ್ಕೆ ಅಡ್ಡಿ ಒದಗಿದಾಗ ಭಕ್ತ ತಳೆಯ ಬೇಕಾದ ನಿಲುವು, ಬಿಂಬ ಚಿಂತನಾಕ್ರಮ, ಧ್ಯಾನಕ್ರಮ, ಅನುಸಂಧಾನ ವಿಚಾರ, ಭಕ್ತಿಸಾಧನೆಯಿಂದ ಜೀವರಿಗಾಗುವ ಆನಂದ, ಸ್ಥೂಲಾಪರೋಕ್ಷ ಮತ್ತು ಬಿಂಬಾಪರೋಕ್ಷಗಳು, ವಿವಿಧ ಜೀವರಿಗೆ ಸಾಧನೆಯಾಗಬೇಕಾದ ಕಾಲವಿವರಣೆ, ದೇವತಾ ತಾರತಮ್ಯ, ಜೀವರ ತಾರತಮ್ಯ, ಗುಣ ಮತ್ತು ಕಕ್ಷ ತಾರತಮ್ಯ, ಅಂಶಾಂಶೀ ವಿಚಾರ, ನದಿಗಳ ತಾರತಮ್ಯ ವಿಚಾರಗಳನ್ನು ಈ ಸುಳಾದಿಗಳಲ್ಲಿ ವಿಜಯದಾಸರು ವಿವರಿಸಿದ್ದಾರೆ.

ಈ ಮೇಲೆ ಹೇಳಿರುವ ವಿಷಯಗಳಲ್ಲದೆ, ಜಟಿಲವಾದ, ಸಮಸ್ಯಾತ್ಮಕವಾದ, ಸುಲಭವಾಗಿ ಅರಿಯಲಸಾಧ್ಯವಾದ ತಾತ್ತ್ವಿಕ ವಿಚಾರಗಳ ಬಗ್ಗೆ ವಿಜಯದಾಸರು ಸುಳಾದಿಗಳ ಮೂಲಕ ಬೆಳಕು ಬೀರಿರುವುದು ದಾಸರ ಅಮೂಲ್ಯ ಕೊಡುಗೆ ಎನ್ನಬಹುದು.

–( ಸಶೇಷ)

# ಗಾಂಗೇಯರಡಿದಾವರೆಯಲ್ಲಿ

ಹಸ್ತಿನಾವತಿಯ ಅರಮನೆಯಲ್ಲಿ ಧರ್ಮರಾಜ – ಅರ್ಜುನ ಇಬ್ಬರೂ ಮಾತಾಡುತ್ತಿದ್ದಾರೆ. ಯುದ್ಧದಲ್ಲಿ ಗೆದ್ದು ದಿಗಂತ ವಿಶ್ರಾಂತ ವಿಖ್ಯಾತಿ ಪಡೆದವರಾದರೂ ಅವರ ವದನಾರವಿಂದಗಳು ಇರಬೇಕಾದಷ್ಟು ಪ್ರಫುಲ್ಲವಾಗಿಲ್ಲ. ಅಸಹನೀಯ ಅವರ್ಣನೀಯ ಮಾನಸಿಕ ವೇದನೆಯ ರೇಖೆಗಳು ಅವರ ಮುಖದ ಮೇಲೆ ಕಾಣುತ್ತಿವೆ. ಗೆದ್ದವರು ಹೀಗೆ ಸಂಕಟ ಪಡುವುದು ವಿಚಿತ್ರವಲ್ಲವೆ?

"ಕುರುಕ್ಷೇತ್ರದ ಸಂಗ್ರಾಮರಂಗದಲ್ಲಿ ದ್ವಾಪರ ಯುಗದ ಮಹಾಶಕ್ತಿ ವ್ಯಕ್ತಿಗಳು ಮಣ್ಣುಪಾಲಾಗಿ ಹೋಗಿದ್ದಾರೆ. ಕೇವಲ ಹದಿನೆಂಟು ದಿನಗಳಲ್ಲಿ, ಹದಿನೆಂಟು ಅಕ್ಷೋಹಿಣಿ ಸೈನ್ಯ ನಿರ್ನಾಮವಾಗಿದೆ. ದಾಯಾದಿಮಾತ್ಸರ್ಯದ ಅಗ್ನಿಜ್ವಾಲೆಯಲ್ಲಿ ಸಿಕ್ಕಿ ಅನರ್ಘ್ಯ ಮಣಿಮಾಣಿಕ್ಯಗಳು ಸುಟ್ಟುಹೋಗಿವೆ. ಸೇಡಿನಕಿಡಿ ಪ್ರಳಯಾಗ್ನಿಯಾಗಿ ದ್ವಾಪರಯುಗದ ಇತಿಹಾಸವನ್ನೇ ರಕ್ತರಂಜಿತಗೊಳಿಸಿದೆ. ಇದೆಲ್ಲವೂ ದೈವಸಂಕಲ್ಪದಂತೆ ನಡೆದ, ಧರ್ಮಸಂಸ್ಥಾಪನೆಯ ಮಹಾಕಾರ್ಯ, ನಾವೆಲ್ಲ ಈ ಜಗದ್ಭೀಕರ ರುದ್ರ ಭವ್ಯನಾಟಕದಲ್ಲಿ ಪಾತ್ರಧಾರಿಗಳು ಮಾತ್ರ, ಇದರ ಸೂತ್ರಧಾರಿ ಬೇರೊಬ್ಬ, ಆದುದಾಯ್ತು. ಗತಘಟನಾವಳಿಗಳನ್ನು ಪದೇ ಪದೇ ನೆನಪುಮಾಡಿಕೊಂಡು ಫಲವೇನು – ಪ್ರಯೋಜನವೇನು?"

— ಅರ್ಜುನ ಕೇಳಿದ.

"ಹಾಗೆಂದು, ಬಂಧು ಬಾಂಧವರ ಘೋರ ಮರಣದ ಈ ದಾರುಣ ದುಃಖವನ್ನು ಮರೆಯಲು ಸಾಧ್ಯವೇ – ತಮ್ಮ? ಗುರುಗಳನ್ನು ಕೊಂದೆವು, ಹಿರಿಯರನ್ನು ಕೊಂದೆವು, ಮಿತ್ರರನ್ನು ಕೊಂದೆವು, ಸಹಪಾಠಿಗಳನ್ನು ಕೊಂದೆವು – ಏಕೆ? ಕೇವಲ ಈ ಭೂಮಿ.ದಾಹದಿಂದ. ಎಲ್ಲರೂ ಹತರಾದ, ಈ ಸ್ಮಶಾನ ಕುರುಕ್ಷೇತ್ರವನ್ನು ಒಂದುಸಲ ಹಾಗೆ ಕಣ್ಣೆತ್ತಿ ನೋಡು ಪಾರ್ಥ— ಎಂತಹ ಕಲ್ಲು ಮನಸ್ಸನ್ನೂ ಕರಗಿಸಿ ನೀರು ಮಾಡಿ ಬಿಡುತ್ತದೆ. ಇಷ್ಟೆಲ್ಲ ಅನಾಹುತಮಾಡಿ, ನಾನು ಸಾಮ್ರಾಟನೆಂದು, ಯಾವ ಹಿಗ್ಗಿನಿಂದ ಸಿಂಹಾಸನದ ಮೇಲೆ ಕೂಡಲಿ? ಇಷ್ಟಮಿತ್ರರು, ಹಿತೈಷಿಗಳು, ಬಂಧು ಬಾಂಧವರು ನೋಡಿ ಹಿಗ್ಗಿದಾಗಲ್ಲವೇ – ನಮ್ಮ ಸಂತೋಷ ಸಂಭ್ರಮಕ್ಕೆ ಬೆಲೆ? ನೀನೇ ಯೋಚನೆ ಮಾಡು– ವಿಜಯ. ನನಗೆ ಈ ಒಂದು ವ್ಯವಹಾರವೂ ಬೇಡ. ಮಾಡಿದ ಅಪರಾಧಕ್ಕಾಗಿ ಜೀವನಪರ್ಯಂತ ಪಶ್ಚಾತ್ತಾಪ ಪಡುತ್ತ – ಕಾಡಿಗೆ ಹೊರಟು ಹೋಗಲು ನನ್ನ ಮನಸ್ಸು ಹಾತೊರೆಯುತ್ತಿದೆ"

– ಧರ್ಮರಾಜ ಭಾರವಾದ ಧ್ವನಿಯಲ್ಲಿ ಹೇಳಿದ.

"ನಿಜ – ಅಣ್ಣ ಅತ್ಯಂತ ದುಃಖದಲ್ಲಿ ಹಾಗೆನ್ನಿಸುವುದು ಸಹಜ. ಕೇವಲ ಹದಿನೆಂಟು ಇಪ್ಪತ್ತು ದಿನಗಳ ಹಿಂದೆ, ಉಭಯಪಕ್ಷದ ಮಹಾಸೈನ್ಯಗಳು ಮಾರಣ ಹೋಮಕ್ಕಾಗಿ –ರೌದ್ರಕುತೂಹಲದಿಂದ–ಸೆಣಸಲು ಸಿದ್ಧವಾಗಿ ನಿಂತಿದ್ದವು. ಉಭಯ ಸೈನ್ಯಗಳು ನಡುವೆ, ಸಾರಥಿಯಾದ ಕೃಷ್ಣ, ನನ್ನ ರಥವನ್ನು ನಿಲ್ಲಿಸಿದಾಗ, ನನಗೂ ಹಾಗೇ ಅನಿಸಿತ್ತಣ್ಣ. ಯಾವ ರಾಜ್ಯ? ಯಾವ ಕೀರ್ತಿ? ಯಾವುದು? ಕಡೆಗೆ ಇಲ್ಲಿ ರಾಜ್ಯಕ್ಕಾಗಿ ಈ ಕಗ್ಗೊಲೆ? ವೈರಾಗ್ಯಪ್ರವೃತ್ತನಾದೆ. ಶಸ್ತ್ರ ಬಿಟ್ಟು ಹೇಳಿದೆ, ಹೋರಾಡೆ, ಯುದ್ಧಮಾಡಲಾರೆನೆಂದು. ಕೂಡಲೆ – ಜಗದ್ಗುರು ಗೀತಾಚಾರ್ಯ ಬೋಧಿಸಿದ. ಸ್ವಧರ್ಮವೆಂದ. ಆಗ ನನಗೂ ಜ್ಞಾನೋದಯವಾಯ್ತಣ್ಣ. ಆದರೆ, ಯುದ್ಧವು ಅನಿವಾರ್ಯಘಟನೆ. ಧರ್ಮಸಂಸ್ಥಾಪನೆಗೆ ಅತ್ಯಗತ್ಯಕರ್ತವ್ಯ; ಸ್ವಧರ್ಮನಿಷ್ಠೆ, ಸ್ವಕರ್ಮಾನುಷ್ಠಾನ. ಪುರುಷೋತ್ತಮ, ಮಾರ್ಗದರ್ಶಿ, ಮಹರ್ಷಿ, ಕೃಷ್ಣ, ನನ್ನನ್ನು ಪುನಃ ಕರ್ತವ್ಯ ಕ್ಷೇತ್ರಕ್ಕೆ ತಂದು ನಿಲ್ಲಿಸಿದ್ದ. ವೀರರಿಬ್ಬರ ವಿಷಯವೇನಿಲ್ಲ – ಧರ್ಮನಂದನ ಆದುದಾಯಿತು. ಈಗ ಚಿಂತಿಸಿ ಫಲವಿಲ್ಲ – ಕೈಮಿಂಚಿ ಹೋಯಿತು. ಗಾಂಡೀವದಿಂದ ಘೋರನಾರಾಚಗಳು ಚಿಮ್ಮಿ ಹೋಯಿತು. ಶತ್ರುಪಕ್ಷದ ಅತಿರಥ ಮಹಾರಥರ ಮಣಿ ಮಕುಟ ಮಂಡಿತ ಮಸ್ತಕಗಳುರುಳಿ ಹೋಯಿತು. ಈಗ ಏನು ತಾನೆ ಮಾಡಲಾದೀತು. ಕೃಷ್ಣ ಹೇಳಿದಂತೆ ಕೇಳುವುದೇ ಸೂಕ್ತವೆಂದು ಕಾಣುತ್ತದೆ."

ಅರಮನೆಯ ಚಂದ್ರಶಾಲೆಯಿಂದ, ಅಣ್ಣ ತಮ್ಮ ಇಬ್ಬರೂ ನೇರವಾಗಿ ಕೃಷ್ಣನ ದರ್ಶನಕ್ಕಾಗಿ ಬಂದರು. ಅವರಿಗೇನು ಸಂದೇಹ ಬಂದರೂ ಆತನ ಸನ್ನಿಧಿಗೆ ಬರುವುದು – ಸಲಹೆ ಪಡೆಯುವುದು – ಪದ್ಧತಿ

ಶ್ರೀಕೃಷ್ಣ ಒಬ್ಬನೇ ಕಣ್‌ಮುಚ್ಚಿ ಗಂಭೀರವಾಗಿ ಕೂತಿದ್ದಾನೆ. ಹೆಗಲ ಮೇಲೆ ಓಲಾಡುತ್ತಿರುವ ವಸ್ತ್ರ ಜಾರಿಬೀಳುವುದರಲ್ಲಿದೆ; ಆದರೆ ಆತನ ಕೊರಳಲ್ಲಿದ್ದ ಕೌಸ್ತುಭ ಮಣಿಹಾರದ ರಮಣೀಯ ಸಂಪರ್ಕ ತಪ್ಪಿ ಹೋಗುವುದೇನೋ ಎಂದು ಯೋಚಿಸುತ್ತ ಹಾಗೇ ನಿಂತಿದೆ. ಧ್ಯಾನಗೋಚರವಾದ ನಿರ್ಗುಣತತ್ತ್ವ, ಚಕ್ಷುಗೋಚರ ಸಗುಣ ಸುಂದರ ರೂಪಧರಿಸಿ ಕುಳಿತಿದೆ. ಒಂದವರಿಬ್ಬರೂ ವಿನಯದಿಂದ ದೂರನಿಂತು ನಮಸ್ಕರಿಸಿದರು. ಕೃಷ್ಣ ಅವರಾಗಮನವನ್ನು ಗಮನಿಸಿಯೇ ಇಲ್ಲ – ಕಣ್ಣು ತೆರೆದು ನೋಡಲೂ ಇಲ್ಲ. ಧರ್ಮರಾಜನಿಗೆ ಯೋಚನೆಯಾಯಿತು. ಏನು ಅಪಚಾರವಾಗಿದೆಯೋ – ಎಂದು. ಭಯವೂ ಆಯಿತು.

ಕೃಷ್ಣ ಧ್ಯಾನ ನಿರತನಾಗಿದ್ದಾನೆ. ಇದು ನಿಜಕ್ಕೂ ಸೋಜಿಗ. ಯೋಗೀಶ್ವರನೂ ಧ್ಯಾನ ಮಾಡಬೇಕೆ? ಯಾರನ್ನು ಕುರಿತು ಈತನ ಧ್ಯಾನ? ಏತಕ್ಕಾಗಿ ಈತನ ಧ್ಯಾನ? ಈತ ಧ್ಯಾನಾದ್ಯನುಷ್ಠಾನಗಳಿಂದ ಪಡೆಯಬೇಕಾದ್ದೇನಿದೆ? ಹಿರಿದಾದ ತತ್ತ್ವವನ್ನು ಕುರಿತು ಗಂಭೀರವಾಗಿ ಚಿಂತನೆ ಮಾಡುವುದಕ್ಕೆ ಧ್ಯಾನವೆಂದು ಹೆಸರು. ಕೃಷ್ಣನಿಗಿಂತಲೂ ಹಿರಿದಾದ ತತ್ತ್ವವಾದರೂ ಯಾವುದಿದೆ?

ಧರ್ಮನಂದನನಿಗೇನೂ ಹೊಳೆಯದೇ ಹೋಯಿತು.

"ಅಣ್ಣ, ಈತನೊಮ್ಮೆ ನನಗೆ ಹೇಳಿದ್ದ – ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ – ಎಂದು. ಈಗ ತಾನೂ ಸಹ ಅದೇ ಕಾರ್ಯ ಮಾಡುತ್ತಿದ್ದಾನೆ" – ಅರ್ಜುನ ಮೆಲ್ಲಗೆ ಹೇಳಿದ.

ಧ್ಯಾನ ನಿರತನಾದ ಗಾನ ಲೋಲನ ಮಂಗಳ ಶ್ರೀರೂಪವನ್ನು ನೋಡುತ್ತ ಸ್ವಲ್ಪ ಕಾಲ ಹಾಗೇ ನಿಂತರು. ಧ್ಯಾನಯೋಗವೆಂದರೇನೆಂದು ಪ್ರತ್ಯಕ್ಷ ಕಂಡಂತಾಯಿತು. ಬ್ರಾಹ್ಮೀಸ್ಥಿತಿಯನ್ನು ಕಣ್ಣಾರೆ ನೋಡಿದಂತಾಯಿತು. ಅಷ್ಟರಲ್ಲಿ ಗೀತಾಚಾರ್ಯನ ಮುದ್ದು ಮುಖದ ಮೇಲೆ ಮುಗುಳ್ನಗೆಯ ಅಲೆಯೊಂದು ಸುಳಿಯಿತು. ಕರುಣೆ ತುಂಬಿದ ಕಣ್ಣು ತೆರೆಯಿತು.

"ಧರ್ಮಮೂರ್ತಿ – ಬಂದು ಬಹುವೇಳೆಯಾಯ್ತೆ?"

ವಿದ್ವಾನ್ ಬ. ನ. ಗುಂಡೂರಾವ್

ಕೃಷ್ಣ ಕೇಳಿದ. ಅಗ್ರಜಾನುಜರು ಸ್ವಾಮಿಯ ಶ್ರೀಪಾದಗಳಿಗೆ ಸಾಷ್ಟಾಂಗ ವಂದನೆ ಮಾಡಿದರು.

"ಹೇಳು – ಪಾರ್ಥ – ಬಂದು ಬಹುವೇಳೆಯಾಯ್ತೇನು? ಬಹುಶಃ ನಿಮಗೆ ತುಂಬ ಬೇಸರವೂ – ಅಸಮಾಧಾನವೂ ಆಗಿರಬೇಕಲ್ಲವೇ?"

ಕೃಷ್ಣ ನಸುನಗೆ ಬೀರಿ ಕೇಳಿದ

"ನಿನ್ನ ದರ್ಶನವೇ ಆನಂದದಾಯಕವಾಗಿರುವಾಗ ಅಸಮಾಧಾನವೆಂದರೇನು? – ಬೇಸರವೆಂದರೇನು – ಪಾರ್ಥಸಾರಥಿ? ಅದಿರಲಿ. ನೀನೂ ಧ್ಯಾನ ಮಾಡಬೇಕೇನು?" – ಧರ್ಮಜ ಗಂಭೀರವಾಗಿ ಕೇಳಿದ.

"ಹೌದು. ಮಾಡಬೇಕಾಗುತ್ತದೆ. ಮಾಡಿದರೆ ತಪ್ಪೇನು – ಧರ್ಮನಂದನ?"

"ಯಾರನ್ನು ಕುರಿತು– ನೀನು ಧ್ಯಾನಮಾಡುವುದು?"

– ಅರ್ಜುನ ಸಲಿಗೆಯಿಂದ ಕೇಳಿದ.

"ವಿಜಯ – ಇದೇನು ಪ್ರಶ್ನೆ ಕೇಳುತ್ತಿದ್ದಿ? ನನ್ನನ್ನು ಕುರಿತು ಯಾರು ಧ್ಯಾನಿಸುತ್ತಾರೆ– ನಾನವರನ್ನು ಕುರಿತು ಧ್ಯಾನಿಸುತ್ತೇನೆ"

"ಹಾಗಾದರೆ ಯಾರಾ ಪುಣ್ಯ ಪುರುಷ?"

"ಆತ ಧಾರ್ಮಿಕ ವಿಖ್ಯಾತ"

"ಯಾರೆಂದು ಕೇಳಬಹುದೇ?"

"ಕರ್ಮಯೋಗಿ"

"ಅರ್ಥವಾಗಲಿಲ್ಲ"

"ಆತ ಕೃತ ಕೃತ್ಯ"

"ತಿಳಿಯಲಿಲ್ಲ"

"ಆತ ಶೀಲವೃದ್ಧ – ವಯೋವೃದ್ಧ – ಜ್ಞಾನವೃದ್ಧ"

"ಅಂತಹವರು ಬಹುಮಂದಿ ಇರಬಹುದಲ್ಲವೇ–ಕೃಷ್ಣ?"

"ಇಲ್ಲ ಧನಂಜಯ ಆತನಿಗೆ ಸರಿಸಮನಾದವರು ಯಾರೂ ಇಲ್ಲ. ಆದು ಅನುಪಮ ಜೀವ – ನಿರುಪಮ ವ್ಯಕ್ತಿ"

ಕೃಷ್ಣನ ಮಾತು ಕೇಳುತ್ತ ಧರ್ಮನಂದನ ಆನಂದ ತುಂದಿಲನಾಗಿ ಹೋದ. ಆ ಪುಣ್ಯ ಜೀವಿಯ ಹೆಸರು ಕೇಳಿ ಧನ್ಯನಾಗಬೇಕೆಂದು ಆತ ತುಂಬ ಕುತೂಹಲ ಪಟ್ಟ.

"ನೀನೇ ಬಾಯಿತುಂಬ ಹೊಗಳುವ ಆ ಧನ್ಯಾತ್ಮ ಯಾರೆಂದು ತಿಳಿಯಲು ನನ್ನ ಮನಸ್ಸು ತುಂಬ ಹಾತೊರೆಯುತ್ತಿದೆ. ಆ ಚರಿತಾರ್ಥ ವ್ಯಕ್ತಿ ಯಾರು ಚಕ್ರಪಾಣಿ?"

"ಆತ ಲೋಕೋತ್ತರ ವ್ಯಕ್ತಿ"

"ಆದು ಆತನನ್ನು ಕುರಿತು ನೀನಾಡುತ್ತಿರುವ ಮೆಚ್ಚಿಕೆಯ ಮಾತೇ ವಿನಹ– ಅದು ಆತನ ನಾಮಧೇಯವಾಗಲಾರದಲ್ಲವೆ?"

"ನಾಮಧೇಯ? – ಎಂತಹ ವಿಚಿತ್ರಮಾತಾಡುತ್ತಿದ್ದಿ ಧರ್ಮನಂದನ. ನಾನು ಮೆಚ್ಚಿದರಾಯಿತಲ್ಲವೆ? ಯಾರ ನಾಮಧೇಯಗಳು ತಾನೆ ಚಿರ ಶಾಶ್ವತವಾಗಿರುತ್ತವೆ?"

"ಹೌದು ಕೃಷ್ಣ ನೀನು ಮೆಚ್ಚುವಂತೆ ಬಾಳುವುದು – ಯಾವುದೇ ವ್ಯಕ್ತಿಯ ಬಾಳಿನಲ್ಲಿ ಧನ್ಯತಮಘಟನೆಯೆಂದು ನಾನು ಹಿರಿಯರಿಂದ ಕೇಳಿದ್ದೇನೆ".

"ಪುಣ್ಯಜೀವಿಯ ಬಾಳಘಟನೆಗಳೆಲ್ಲ ಧನ್ಯತಮವೇ ಆಗಿರುತ್ತವೆ. ಆ ಪುಣ್ಯ ಜೀವಿಯಾರೆಂದು ಈ ವೇಳೆಗೆ ನಿನಗರ್ಥವಾಗಿರಬಹುದೆಂದು ಭಾವಿಸುತ್ತೇನೆ."

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

"ವಿದುರನಿರಬಹುದೆಂದು ಭಾವಿಸುತ್ತೇನೆ"

"ಅಲ್ಲ"

"ಕೃಷ್ಣ ನಿನ್ನ ಮನೋಗತವನ್ನರಿಯುವುದು ನನ್ನಂತಹ ಅವಿವೇಕಿಗೆ ತುಂಬ ಕಷ್ಟ"

"ಇದರಲ್ಲಿ ಅವಿವೇಕದ ಪ್ರಶ್ನೆ ಏನಿದೆ ಧರ್ಮನಂದನ ನಿನ್ನನ್ನು ನೀನು ಅವಿವೇಕಿ ಎಂದುಕೊಳ್ಳುವ ಈ ಆತ್ಮನಿಂದನಾ ಕಾರ್ಯಕ್ಕೇಕೆ ಕೈ ಹಾಕುತ್ತಿರುವೆ"

"ಕುರುಕ್ಷೇತ್ರ ಸಂಗ್ರಾಮದಲ್ಲಿ ಎಷ್ಟೊ ಅಮೂಲ್ಯ ಜೀವಗಳು ಹತವಾಗಿ ಹೋಗಿವೆ."

"ಅರ್ಥವಾಯಿತು – ಧರ್ಮರಾಜ, ಮಡಿದವರನ್ನು ಸಾಮಾನ್ಯವಾಗಿ ಎಲ್ಲರೂ ಒಳ್ಳೆಯವರೆಂದೇ ಭಾವಿಸುವುದು ವಾಡಿಕೆ. ಲೋಕದಲ್ಲಿ ಹಿರಿಯರಾದವರು ಹೇಳುವ ಒಂದು ಗಾದೆ ಇದೆ – 'ಜಗತ್ತಿನಲ್ಲಿ ಇಬ್ಬರೇ ಒಳ್ಳೆಯವರು ಒಬ್ಬ ಸತ್ತು ಹೋಗಿರುವಾತ, ಇನ್ನೊಬ್ಬ ಹುಟ್ಟದೇ ಇರುವಾತ'. ನಾನು ಮಾತಾಡುತ್ತಿರುವುದು ಮೃತರಾದವರ ವಿಷಯವಲ್ಲ ಮೃತ್ಯುವನ್ನೂ ಸಹ ತನ್ನ ಅಂಕೆಯಲ್ಲಿರಿಸಿಕೊಂಡಿರುವಾತನನ್ನು ಕುರಿತು. ಪರಮ ಪರಿಶುದ್ಧ ಜೀವಿಯಾದ ಗಾಂಗೇಯರು. ನನ್ನನ್ನೇ ಕೂಗಿ ಕರೆಯುತ್ತಿದ್ದಾರೆ – ಧರ್ಮಮೂರ್ತಿ ಶರತಲ್ಪಗತನಾದ ಆ ಶೌರ್ಯಮೂರ್ತಿ ಉತ್ತರಾಯಣಕ್ಕಾಗಿ ಕಾದಿದ್ದಾರೆ ಆತ ಕರೆಯುವವರೆಗೂ – ಇಚ್ಛಿಸುವವರೆಗೂ – ಮೃತ್ಯುದೇವತೆ ಆತನ ಮೇಲೆ ಕೈಹಾಕುವಂತಿಲ್ಲ. ನನ್ನ ಮನಸ್ಸು ಆತನ ಬಳಿಗೆ ಹೊರಟು ಹೋಗಿದ್ದುದರಿಂದ ನೀವುಗಳು ಬಂದದ್ದು ಸಹ ಗಮನಿಸಲಿಲ್ಲ – ಮನ್ನಿಸಬೇಕು – ಅಗ್ರಜಾನುಜರು".

ಕೃಷ್ಣನ ವಾಗ್ಧಾರೆ – ನಿರ್ಮಲಮಂದಾಕಿನಿಯಂತೆ ಪ್ರವಹಿಸಿತು. ಪಿತಾಮಹರ ಸುದ್ದಿ ಕೇಳಿ ಅವರು ಚಕಿತರಾದರು. ಸಾಕಿಸಲಹಿದ ತಾತನನ್ನು ಸ್ಮರಿಸಿಕೊಂಡು ಮೊಮ್ಮಕ್ಕಳು ಗಳಗಳನೆ ಅತ್ತುಬಿಟ್ಟರು ಯಾರ ಕನಕರಥದ ಮೇಲೆ ತಾಳಧ್ವಜ ತಾನೇ ತಾನಾಗಿ ಮೆರೆದಾಡಿತ್ತೋ, ಏಕಾದಶ ಅಕ್ಷೋಹಿಣಿ ಸೈನ್ಯ ಪಕ್ಷದ ಗೌರವಾನ್ವಿತ ಮಹಾಸೇನಾನಿಯಾಗಿ, ಮಾನಧನ ಸುಯೋಧನನ ಉತ್ತಮಾಂಗ ಯಾರ ಪಾದಾರವಿಂದಗಳಲ್ಲಿ ಬಾಗಿ ನಮಸ್ಕರಿಸಿತ್ತೋ, ಯಾರ ಶೌರ್ಯ ವಿದ್ಯುಲ್ಲತೆ ಜಗತ್ತನ್ನೇ ಬೆರಗುಗೊಳಿಸಿ, ಶತ್ರುಪಕ್ಷದ ಲಕ್ಷ ಲಕ್ಷ ಮಸ್ತಕಗಳನ್ನು ಹೊಡೆದುರುಳಿಸಿತ್ತೋ, ಯಾರ ಅಪ್ರತಿಹತ ಪರಾಕ್ರಮದ ಪರಿಣಾಮವಾಗಿ, ಪಾರ್ಥಸಾರಥಿಯೂ ಸಹ, ತಾನು ಮಾಡಿದ್ದ ಪ್ರತಿಜ್ಞೆಯನ್ನು ತ್ಯಜಿಸಿ ಚಕ್ರಧಾರಿಯಾಗಿ, ರಥವಿಳಿದು, ಧರಣಿ ಮಂಡಲವೇ, ನಡುಗಿ ಹೋಗುವಂತೆ ಧಾವಿಸಿ ಉರವಣಿಸಿ ಬರುವಂತಾಯಿತೋ ಯಾರ ಉದಾತ್ತ ವ್ಯಕ್ತಿತ್ವ. ಧವಳಗಂಗೆಯಂತೆ, ಸಾರ್ವಕಾಲಿಕ ಮಹತ್ತ್ವವನ್ನು ಪಡೆಯಿತೋ, ಯಾವ ಕರ್ಮಯೋಗಿಯ ಬಾಳು ತ್ಯಾಗಮಯವೂ, ಕರ್ತವ್ಯ ಪ್ರಜ್ಞಾ ಪೂರ್ಣವೂ ಆಗಿದ್ದು, ಲೋಕ ವಿಖ್ಯಾತವಾಗಿತ್ತೋ – ಅಂತಹ ದಿವಿಜನದೀಸುತ, ಕೃಷ್ಣನನ್ನ ಕೂಗಿ ಕರೆಯುತ್ತಿದ್ದಾನೆ – ಧ್ಯಾನಿಸುತ್ತಿದ್ದಾನೆ. ಧ್ಯಾನ ಗೋಚರವಾದ ತತ್ತ್ವವನ್ನು – ನಯನ ಗೋಚರವಾಗುವಂತೆ ಕಂಡು ಆನಂದಿಸಬೇಕೆಂದು ಹೆಬ್ಬಯಕೆ, ಪಿತಾಮಹರ ಮನಸ್ಸಿನಲ್ಲಿರಬಹುದೇ? ಏನು ರೋಮಾಂಚಕಾರಿ ಘಟನೆ ಇದು!! ಎಂತಹ ಭಕ್ತಿ ಭಾವಲಹರಿ ಏಳುತ್ತಿರಬಹುದು ಬಾಣ ಮಂಚದ ಮೇಲೆ ಪವಡಿಸಿರುವ ಕುರುಕುಲ ಪಿತಾಮಹರ ಮಾನಸಸಾಗರದಲ್ಲಿ!!

"ಪಾರ್ಥ, ನಾನು ಹಿಂದೊಮ್ಮೆ ಹೇಳಿದ್ದ ಮಾತು, ನಿನಗೆ ನೆನಪಿದೆಯೇ?"

"ಏನು?"

"ನ ಮೇ ಭಕ್ತಃ ಪ್ರಣಶ್ಯತಿ"

"ಹೌದು ಕೃಷ್ಣ"

"ಯೋಗ ಕ್ಷೇಮಂ ವಹಾಮ್ಯಹಂ"

"ನಿಜ ಕೃಷ್ಣ"

"ತಪಸ್ವಿಭ್ಯೋಽಧಿಕೋ ಯೋಗೀ"

"ದಿಟ – ವಾಸುದೇವ ನೆನಪಿದೆ"

"ಸ್ವ ಕರ್ಮಣಾತಂ ಅಭ್ಯರ್ಚ ಸಿದ್ಧಿಂ ವಿಂದತಿ"

"ನಿಜ – ಕೃಷ್ಣ – ಜ್ಞಾಪಕವಿದೆ – ನೀನೇ ಮನಸಾರೆ ಹೊಗಳುವಂತೆ ಬಾಳಿಬದುಕಿದ, ಪಿತಾಮಹ ಭೀಷ್ಮರು ಧನ್ಯರು"–

ಅರ್ಜುನ ಕಣ್ಣೊರಸಿಕೊಳ್ಳುತ್ತ ಹೇಳಿದ. ಅಂತಹ ಪೂಜ್ಯಪಾದರನ್ನು ಹೊಡೆದುರುಳಿಸಿದ ಆ ದುರ್ಭೀಕರ ಘಟನೆ ನೆನಪಾಗಿ ಧರ್ಮಜ. ದುಃಖವನ್ನು ತಡೆಯಲಾರದೇ ಹೋದ. ಮನದ ಸಂಕಟವೆಲ್ಲ ಕಣ್ಣೀರಧಾರೆಯಾಗಿ ಪ್ರವಹಿಸಲಾರಂಭಿಸಿತು ಅತೀವ ದುಃಖತಪ್ತಜೀವಿಯನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದಂತೆಲ್ಲ ದುಃಖ ಉಮ್ಮಳಿಸುತ್ತದೆ – ಮರುಕಳಿಸುತ್ತದೆ.

ಧರ್ಮಪುತ್ರ – ಪಿತಾಮಹರಾದ ಗಾಂಗೇಯರು ಇಚ್ಛಾಮರಣಿ – ಎಂಬುದನ್ನು ಮರೆತೆಯೇನು?– ಕೃಷ್ಣ ಶಾಂತವಾಗಿ ಪ್ರಶ್ನಿಸಿದ.

ಇರಬಹುದು – ಅವರು ಇಚ್ಛಾಮರಣಿಯೇ ಇರಬಹುದು. ಆದರೆ ನಾವೆಂತಹ ನೀಚಕೃತ್ಯ ಮಾಡಿದ್ದೇವೆ – ಧರ್ಮಜನ ಕಂಠ ಗದ್ಗದವಾಗಿತ್ತು.

ವ್ಯಕ್ತಿ ಮಾಡುವ ಯಾವುದೇ ಕಾರ್ಯವಾದರೂ, ಅದು ಈಶ್ವರ ಪ್ರೇರಿತವಾಗಿರುತ್ತದೆ – ಎಂದಾಗ, ಯಾವುದು ನೀಚ ಕೃತ್ಯ ಯಾವುದಿಲ್ಲ – ಎಂದು ನಿರ್ಣಯ ಮಾಡುವ ಅಧಿಕಾರವಾದರೂ ವ್ಯಕ್ತಿಗಳಿಗಿರಲು ಹೇಗೆ ಸಾಧ್ಯ? – ಅದು ಹಾಗಿರಲಿ ಧರ್ಮನಂದನ – ಇದು ಜಿಜ್ಞಾಸೆಗೆ ತಕ್ಕ ಸಮಯವಲ್ಲ, ನಾವೀಗಲೇ ಭೀಷ್ಮರ ಬಳಿಗೆ ಹೋಗಬೇಕಾಗಿದೆ.

"ಆ ಮಹಾನುಭಾವರ ದರ್ಶನ ಭಾಗ್ಯ ನಮಗಿದೆಯೆ ಕೃಷ್ಣ?"

"ನಿನಗಲ್ಲದೆ ಇನ್ನಾರಿಗಾ ಭಾಗ್ಯ ನಿನ್ನನ್ನು ಕಂಡರೆ ಗಾಂಗೇಯರಿಗೆ ಅಪಾರ ಅಭಿಮಾನ. ಅದೂ ಅಲ್ಲದೆ ಈ ಸಂದರ್ಭದಲ್ಲಿ ನೀನವರ ದರ್ಶನಕ್ಕೆ ಹೋಗಬೇಕಾದ್ದು ಅತ್ಯಗತ್ಯ"

"ಆತನ ಬಳಿಗೆ ಹೋಗಲು ನಮಗೆ ಧೈರ್ಯವಿದೆಯೇ – ಮುಖವಿದೆಯೇ"

"ಇಲ್ಲದೆ ಏನಾಗಿದೆ ಧರ್ಮಮೂರ್ತಿ? ಉತ್ತರಾಯಣ ಸಮೀಪಿಸುತ್ತಿದೆ. ಅದುವರೆಗೂ ಭೀಷ್ಮರು ಈ ಲೋಕದಲ್ಲಿರುತ್ತಾರೆ ಅವರು ಈ ಲೋಕವನ್ನು ಬಿಟ್ಟ ನಂತರ ಒಂದು ಬಗೆಯ ಕತ್ತಲೆ ಆವರಿಸುತ್ತದೆ"

"ಕತ್ತಲೆ ಆವರಿಸುತ್ತದೆಯೆ?"

"ಹೌದು ಧರ್ಮ ಮೂರ್ತಿ. ಗಾಂಗೇಯರನ್ನು ನೀವು ಕೇವಲ ಪಿತಾಮಹನೆಂದು ಮಾತ್ರ ಭಾವಿಸಿದ್ದರೆ, ಅದು ದೊಡ್ಡ ತಪ್ಪಾಗುತ್ತದೆ. ಆತ ಜ್ಞಾನ ಭಾಸ್ಕರ ಸಕಲ ಶಾಸ್ತ್ರ ಪಾರಂಗತ, ರಾಜನೀತಿ ನಿಪುಣ. ಧನುರ್ವಿದ್ಯಾ ಪ್ರವೀಣ, ಲೋಕ ನೀತಿ ಧುರೀಣ, ಅಗ್ರಮಾನ್ಯನಾದ ಮಹಾಯೋಗಿ, ಪರಮ ಶ್ರೇಷ್ಠ ಕರ್ಮ ಯೋಗಿ, ಸಕಲ ಧರ್ಮಗಳನ್ನು ಬಲ್ಲ ಮೇಧಾವಿ–ಪ್ರಜ್ಞಾನಿಧಿ. ನಿನ್ನ ಮನಸ್ಸಿನಲ್ಲಿ ರಾಜನೀತಿಗೆ, ಮೋಕ್ಷ ಧರ್ಮಕ್ಕೆ, ಸಾಮಾನ್ಯ ಧರ್ಮ ಸೂಕ್ಷ್ಮಗಳಿಗೆ ಸಂಬಂಧ ಪಟ್ಟಂತೆ–ಅಥವ ಇನ್ನುವುದೇ ರೀತಿಯ ಸಂದೇಹಗಳಿದ್ದರೂ, ಆತನನ್ನು ಕೇಳಿ ನೀನೀಗಲೇ ಪರಿಹರಿಸಿಕೊಳ್ಳಬೇಕು. ಆರ್ಯಾವರ್ತಕ್ಕೆ ಅಧಿಪತಿಯಾಗುವ, ರಾಜ್ಯ ವ್ಯವಹಾರಗಳನ್ನು ನಿರ್ವಹಿಸ ಬೇಕಾಗಿರುವ ನೀನು ಅವರಿಂದ ಅನೇಕ ವಿಷಯಗಳನ್ನು ಕೇಳಿ ತಿಳಿದುಕೊಳ್ಳಬೇಕಾಗಿದೆ. ನಿನ್ನ ಮುಖಾಂತರ ಜಗತ್ತಿಗೆ ತುಂಬ ದೊಡ್ಡ ಉಪಕಾರವಾಗಬೇಕಾಗಿದೆ. ರಥವನ್ನು ಬೇಗ ಸಿದ್ಧ ಪಡಿಸು ಪ್ರಯಾಣಕ್ಕಣಿಯಾಗು. ಜ್ಞಾನ ಜಲಧಿ ಅಗಮ್ಯ, ಅಪಾರ ನಿಜ, ಆದರೆ ಆ ಜಲಧಿಯ ಆಳವನ್ನು ವೈಶಾಲ್ಯವನ್ನೂ ಬಲ್ಲ ಆ ಪರಮ ಪೂಜ್ಯರ ಸನ್ನಿಧಾನಕ್ಕೆ ನಾವೀಗ ವಿದ್ಯಾರ್ಥಿಗಳಂತೆ ಹೋಗಬೇಕು. ಅವರಿಂದ ಬಹುದೊಡ್ಡ ಪಾಠ ಕಲಿಯ ಬೇಕಾಗಿದೆ ಕಾಲ ಮಿಂಚಿ ಹೋದ ನಂತರ ಚಿಂತಿಸಿದರೆ ಫಲವಿಲ್ಲ – ಬೇಗ ಪ್ರಯಾಣಕ್ಕೆ ಸಿದ್ಧನಾಗು –

ಕೃಷ್ಣ ಗಂಭೀರವಾಗಿ ಹೇಳಿದ. ಆತನ ಅಭಿಪ್ರಾಯವನ್ನು ಗ್ರಹಿಸಿದ ಪಾಂಡವರು, ಪಿತಾಮಹರ ದರ್ಶನಕ್ಕಾಗಿ ಕೂಡಲೇ ಹೊರಟರು. ದಾರಿಯಲ್ಲಿ ಯಾರೊಬ್ಬರೂ ಮಾತಾಡಲಿಲ್ಲ. ಪರಮಾತ್ಮನನ್ನು ಅನುಸರಿಸಿಕೊಂಡು ಹೋಗುವ ಪಂಚ ಪ್ರಾಣಗಳಂತೆ ಪಂಚ ಪಾಂಡವರು ಕೃಷ್ಣನನ್ನು ಹಿಂಬಾಲಿಸಿ ಹೊರಟರು.

ಕುರುಕ್ಷೇತ್ರದ ಒಂದು ಪಾರ್ಶ್ವದಲ್ಲಿ ಆಚಾರ್ಯ ಭೀಷ್ಮರು ಶರಶಯನದಲ್ಲಿ ಮಲಗಿದ್ದಾರೆ. ಬ್ರಹ್ಮಚರ್ಯ, ಶೌರ್ಯ, ಪರಾಕ್ರಮ–ಕರ್ತವ್ಯನಿಷ್ಠೆ–ಜ್ಞಾನ ಭಕ್ತಿ ವೈರಾಗ್ಯಗಳೇ ಮೂರ್ತಿಭವಿಸಿದಂತಿದ್ದ, ಭೀಷ್ಮರ, ಮುಖಮಂಡಲ ಪ್ರಶಾಂತವಾಗಿದೆ. ಉಪಾಧಿಗಳಿಂದ ಹೊರಗೆ ನಿಂತು ಜಗತ್ತನ್ನು ವೀಕ್ಷಿಸುವ ದಿವ್ಯ ಚೇತನದ ಭವ್ಯ ಪ್ರಭೆಯಿಂದಾಗಿ ಆತನ ಸನ್ನಿಧಾನವೇ ಜ್ಯೋತಿರ್ಮಯವಾಗಿದೆ. ಕೌರವ ಪಾಂಡವರ ಮಾತ್ಸರ್ಯದ ಫಲವಾಗಿ ಸಿಡಿದೆದ್ದ ಜಗದ್ಭೀಕರ ಪ್ರಳಯಂಕರೀ ಜ್ವಾಲಾಮುಖಿ ಕುರುಕ್ಷೇತ್ರ ಸಂಗ್ರಾಮದಲ್ಲಿ, ಹತ್ತು ದಿನ, ಪ್ರಧಾನ ಸೇನಾನಿಯಾಗಿ ತನ್ನ ಶೌರ್ಯವನ್ನು ಮೆರೆದಿದ್ದ ಸೇನಾಪತಿ ಭೀಷ್ಮನಲ್ಲ ಈಗ ಆತ. ಯಾರ ಶಸ್ತ್ರಾಸ್ತ್ರಪ್ರಯೋಗ ಕೌಶಲಕ್ಕೆ, ಯಾರ ಮಂತ್ರಾಸ್ತ್ರ ದೀಧಿತಿಗೆ, ಅತಿರಥ ಮಹಾರಥರು ಚಿಟ್ಟೆಗಳಂತೆ ಸುಟ್ಟುಬೂದಿಯಾದರೋ – ಆ ರಣ ಪಂಡಿತನಲ್ಲ ಈಗ ಆತ. ದೈವ ಸಂಕಲ್ಪವನ್ನು ಮೀರಲಾರಿಗಾದರೂ ಅಸದಳವೆಂಬುದಕ್ಕೆ, ಲೋಕವ್ಯವಹಾರದಲ್ಲಿ ವ್ಯಕ್ತಿ ಕೇವಲ ನಿಮಿತ್ತಮಾತ್ರ; ಎಲ್ಲರೂ ಈ ಜಗನ್ನಾಟಕದಲ್ಲಿ ಸೂತ್ರಧಾರಿಗಳಾಗಲು ಸಾಧ್ಯವಿಲ್ಲ– ಪಾತ್ರಧಾರಿಗಳು ಮಾತ್ರವೆಂಬುದಕ್ಕೆ, ಜೀವಂತಸಾಕ್ಷಿಯಂತೆ ಮಲಗಿದ್ದಾರೆ ಭೀಷ್ಮರು. ಮಂತ್ರದ್ರಷ್ಟಾರರೂ, ಬ್ರಹ್ಮವೇತ್ತರೂ ಆದ ಅನೇಕ ಮಹರ್ಷಿಗಳು, ಆತನ ಸೇವೆ ಮಾಡುವ ಅವಕಾಶ ಸಿಕ್ಕಿದ್ದೇ ಪರಮಸೌಭಾಗ್ಯವೆಂಬಂತೆ – ಸುತ್ತಲೂ ನಿಂತಿದ್ದಾರೆ. ಕುರುವೃದ್ಧರ ಬಾಳಿನ ಸಂಧ್ಯಾಸಮಯದಲ್ಲಿ, ಅವರ ಉಪದೇಶ ವಾಣಿಯನ್ನು ಕೇಳಿ ಧನ್ಯರಾಗುವ ಅವಕಾಶ ದೊರೆತರೆ ಸಾಕು – ಪುಣ್ಯಫಲಿಸಿದಂತೆ– ಎಂದು ಆ ಮಹರ್ಷಿ ಸಮೂಹ ಭಾವಿಸಿದೆ. ಕೃಷ್ಣನ ದರ್ಶನ ಭಾಗ್ಯ ದೊರೆಯುವುದೆಂಬ ಸಂತಸ, ಅವರ ತೇಜೋಮಯ ವದನಾರವಿಂದಗಳಲ್ಲಿ ತುಳುಕಾಡುತ್ತಿತ್ತು.

ಭೀಷ್ಮರು ತ್ರಿಕರಣ ಪೂರ್ವಕವಾಗಿ – ಕರ್ಮಣಾ – ಮನಸಾ – ಗಿರಾ ಭಗವದ್ಧ್ಯಾನದಲ್ಲಿ ಲೀನವಾಗಿದ್ದರು.

ಆರಿರಾಧಯಿಷುಃ ಕೃಷ್ಣಂ
ವಾಚಂ ಜಿಗದಿಷಾಮಿಯಾಮ್
ತಯಾ ವ್ಯಾಸ ಸಮಾಸಿನ್ಯಾ
ಪ್ರೀಯತಾಂ ಪುರುಷೋತ್ತಮಃ

ಮೇಘಗಂಭೀರ ಧ್ವನಿಯಲ್ಲಿ ಆ ನಿಃಶಬ್ದ ವಾತಾವರಣದಲ್ಲಿ ದೂರಕ್ಕೆ ಕೇಳುವಂತಿತ್ತು ಆಚಾರ್ಯ ಗಾಂಗೇಯನ ಕಂಠಶ್ರೀ. ಪಾರ್ಥಸಾರಥಿಯನ್ನು ಸ್ತುತಿಸುತ್ತ ಏನೆಲ್ಲ ಮಾತು ನನ್ನ ಬಾಯಿಂದ ಒಸರುತ್ತದೆಯೋ, ವ್ಯಾಸ ಸಮಾಸಿನ್ಯಾ – ಸುದೀರ್ಘವಾಗಲಿ, ಅತ್ಯಂತ ಸಂಕ್ಷೇಪವಾಗೇ ಇರಲಿ–ಅದರಿಂದ – ಪ್ರೀಯತಾಂ ಪುರುಷೋತ್ತಮ – ಪುರುಷೋತ್ತಮನು ಸುಪ್ರೀತನಾಗಲಿ – ಎಂದಾಗ – ಭೀಷ್ಮರ ಕಣ್ಣಂಚಿನಲ್ಲಿ ನಾಲ್ಕುಹನಿ ಕಂಬನಿ ತುಳುಕಿತು.

ಅಷ್ಟರಲ್ಲಿ ಪಾಂಡವರನ್ನು ಸಂಗಡ ಕರೆತಂದ ಪಾರ್ಥಸಾರಥಿಗೆ ಭೀಷ್ಮರು ಕೈಮುಗಿದರು – ಮಲಗಿಕೊಂಡೇ ಕೈಮುಗಿದರು. ಭಕ್ತ ಪ್ರೀತನಾದ ಕೃಷ್ಣ, ಅವರ ಯೋಗಕ್ಷೇಮವನ್ನು ವಿಚಾರಿಸುತ್ತ, ಮುಕ್ತಕಂಠದಿಂದ ಹೇಳಿದ –

ಭವಾಂಸ್ತು ಮಮ ಭಕ್ತಶ್ಚ
ನಿತ್ಯಂ ಚಾರ್ಜವಮಾಸ್ಥಿತಃ
ದಮೇ ತಪಸಿ ಸತ್ಯೇ ಚ
ದಾನೇ ಚ ನಿರತಃ ಶುಚಿಃ
ಅರ್ಹಸ್ತ್ವಂ ಭೀಷ್ಮ ಮಾಂ
ದ್ರಷ್ಟುಂ ತಪಸಾ ಸ್ವೇನ ಪಾರ್ಥಿವ
ತವಹ್ಯುಪಸ್ಥಿತಾ ಲೋಕಾ
ಯೇಭ್ಯೋ ನಾವರ್ತತೇ ಪುನಃ

ದಿವ್ಯಲೋಕ ನಿನ್ನನ್ನು ಕೈಬೀಸಿ ಕರೆಯುತ್ತಿದೆ. ನಿನಗೆ ಇನ್ನೆಂದಿಗೂ ಜನ್ಮಮರಣಗಳ ಸೋಂಕಿಲ್ಲ ಶಾಶ್ವತ ಪದವಿ ಪಡೆಯಲು ನೀನು ಸಂಪೂರ್ಣ ಅರ್ಹತೆಯನ್ನು ಹೊಂದಿರುವ ಮಹಾನುಭಾವ. ಇನ್ನು ಕೇವಲ ಐವತ್ತಾರು ದಿನ ಮಾತ್ರ ಈ ಲೋಕದಲ್ಲಿ ಕಳೆಯಬೇಕಾಗಿದೆ. ಅಷ್ಟೆ–ಅನಂತರ ನಿನ್ನ ಸ್ಥಾನ ನನ್ನಲ್ಲಿ.

ಕೃಷ್ಣನ ಮಾತುಗಳನ್ನು ಕೇಳುತ್ತ ಭೀಷ್ಮರು ಪುಲಕಿತರಾದರು. ಆತನ ಕೃಪಾಪೀಯೂಷಧಾರೆಯಲ್ಲಿ ಕರಗಿ ಹೋದರು. ಕೃಷ್ಣನಿಂದ ನೇರವಾಗಿ ಇಂತಹ ಮಾತುಗಳನ್ನು ಕೇಳಿದ ಜೀವಿಗಳು, ಲೋಕದಲ್ಲಿ ಬಹುವಿರಳ. ಬಹುಶಃ ಶಾಂತನವ, ತನ್ನ ಭಾಗ್ಯಕ್ಕೆ ತಾನೇ ಹಿಗ್ಗಿ ಹೋಗಿರಬೇಕು. ಅಷ್ಟರಲ್ಲಿ ಕೃಷ್ಣ ಹೇಳಿದ – "ಜ್ಞಾತಿವಧಜನ್ಯ ಶೋಕೋಪಹತ ಚೇತನನಾದ ಧರ್ಮನಂದನ, ಜ್ಞಾನ ಭಿಕ್ಷೆಯಾಗಿ, ನಿನ್ನ ಸನ್ನಿಧಿಗೆ ಬಂದಿದ್ದಾನೆ ಕೃಪೆಮಾಡಿ ಅತನಿಗೆ ಸಕಲ ಶಾಸ್ತ್ರರಹಸ್ಯಗಳನ್ನೂ ತಿಳಿಸಿ, ಅತನನ್ನು ಕಾಪಾಡಬೇಕು".

" ಎಂತಹ ವಿಚಿತ್ರವಾದ ಮಾತಾಡುತ್ತಿರುವೆ – ವಾಸುದೇವ ? ಪಾರ್ಥಗಾಂಡೀವವಿನಿರ್ಮುಕ್ತ ನಿಶಿತನಾರಾಚಜರ್ಝರಿತ ಶರೀರನಾಗಿರುವ ನಾನು, ಮಾತಾಡುವ ಸ್ಥಿತಿಯಲ್ಲೇ ಇಲ್ಲ. ನನ್ನ ಸ್ಮೃತಿ ಎಲ್ಲ ಮಂಕಾಗಿ ಹೋಗಿದೆ. ಕೇವಲಂ ತವ ವೀರ್ಯೇಣತೀಷ್ಠಾಮಿ – ಮಧುಸೂದನ. ಕೇವಲ ನಿನ್ನ ಪ್ರಭಾವದಿಂದ ಬದುಕಿದ್ದೇನೆ–ಅಷ್ಟೆ. ಅದೂ ಅಲ್ಲದೆ ಸರ್ವಜ್ಞನೂ ಸರ್ವಲೋಕ ಶರಣ್ಯನೂ ಆದ ನೀನೇ ಇಲ್ಲಿರುವಾಗ – ನಿನ್ನ ಮುಂದೆ– ಮಾತಾಡುವಷ್ಟು ಸಾಮರ್ಥ್ಯ ನನಗೆಲ್ಲಿ ಬರಬೇಕು ಜಗನ್ನಾಥ ? – ಎಂದರು ಭೀಷ್ಮಾಚಾರ್ಯರು.

" ಜ್ಞಾನನಿಧಿ–ನೀನೇ ಹಾಗೆಂದರೆ ಧರ್ಮರಾಜನ ಸಂಶಯಗಳು ನಿವಾರಣೆಯಾಗುವುದಾದರೂ ಹೇಗೆ ? – ಸಾಗರದಲ್ಲೇ ಉಪ್ಪಿಲ್ಲವೆಂದರೆ ಇನ್ನು ದೊರೆಯುವುದು ತಾನೆ ಎಲ್ಲಿ? ನಿನ್ನ ಎಲ್ಲ ವ್ಯಥೆಗಳೂ ನಿವಾರಣೆಯಾಗುವುದೇ ಅಲ್ಲದೆ – ಜ್ಞಾನಾನಿಚ ಸಮಗ್ರಾಣಿ ಪ್ರತಿಭಾಸ್ಯಂತಿ ತೇ – ಅನಘ– ಸಕಲ ಶಾಸ್ತ್ರ ರಹಸ್ಯಗಳೂ ನಿನಗೆ ಸುಸ್ಪಷ್ಟವಾಗಿ ಗೋಚರಿಸುತ್ತವೆ. ಸಕಲ ಜ್ಞಾನರಾಶಿಯೂ ನಿನಗೆ ಕರತಲಾಮಲಕವಾಗಿರುತ್ತದೆ – ಇದು ನನ್ನ ಅನುಗ್ರಹ. ಧರ್ಮರಾಜನಿಗೆ ನೀನು ಧರ್ಮದ ಯಥಾರ್ಥ ಸ್ವರೂಪವನ್ನು ತಿಳಿಸಲೇ ಬೇಕು – ತನ್ಮೂಲಕ ಜ್ಞಾನ ಗಂಗೆಯಿಂದ ಭಾರತಭೂಮಿಯನ್ನು ಅಪ್ಲಾವಿತಗೊಳಿಸಲೇ ಬೇಕು. ಭವಿಷ್ಯತ್ಕುಲಕ್ಕೊಂದು ಜ್ಞಾನ ಭಂಡಾರವನ್ನು ಕೊಟ್ಟು ಹೋಗಲೇ ಬೇಕು. ನನ್ನ ಮಾತನ್ನು ನಡೆಸಲೇ ಬೇಕು. ದೇವವ್ರತ "

ಕೃಷ್ಣ ಒತ್ತಾಯ ಪೂರ್ವಕವಾಗಿ ಹೇಳಿದ – ಆ ಮುಮುಕ್ಷು ಜೀವಕ್ಕೆ ಪರಮಾನುಗ್ರಹಮಾಡಿದ ತತ್ಫಲವಾಗಿ ವಿಮಲೋಜ್ವಲ ಪ್ರತಿಭಾಮೂರ್ತಿಯಾದ ಭೀಷ್ಮರು ಧರ್ಮನಂದನನನ್ನು ಕೃಪಾದೃಷ್ಟಿಯಿಂದ ನೋಡುತ್ತ ಹೇಳಿದರು–

ಯುಧಿಷ್ಠಿರಸ್ತು ಧರ್ಮಾತ್ಮಾ
ಮಾಂ ಧರ್ಮಾನನು ಪೃಚ್ಛತು
ಏವಂ ಪ್ರೀತೋ ಭವಿಷ್ಯಾಮಿ
ಧರ್ಮಾನ್ ವಕ್ಷ್ಯಾಮಿಚಾಖಿಲಾನ್

ಪಾಂಡವರು ಗಾಂಗೇಯರಡಿದಾವರೆಗಳಿಗಭಿನಮಿಸಿ ತಲೆಬಾಗಿ ನಿಂತರು. ಧರ್ಮನಂದನ ಭವ್ಯ ವ್ಯಕ್ತಿತ್ವವನ್ನು ಪಿತಾಮಹರು ಮನಸಾರೆ ಮೆಚ್ಚಿ ಮಾತಾಡಿದಾಗ – ಆತನ ಕಣ್ಣೀರ ಧಾರೆ, ಆ ಪೂಜ್ಯಪಾದನ ಪಾದಾರವಿಂದಗಳನ್ನು ತೊಳೆಯದೆ ಇರಲು ಸಾಧ್ಯವೇ !!

———

## ಕಿಶೋರ ಜಗತ್

# ನಂಬಿಕೆಯ ಫಲ

ರಾವಣನ ತಮ್ಮ ವಿಭೀಷಣನು ರಾಮನು ವಾನರ ಸೈನ್ಯದೊಡನೆ ಬಂದು ಸಮುದ್ರದ ತೀರದ ದಂಡೆಯಲ್ಲಿ ಬಿಡಾರ ಮಾಡಿದ ಸುದ್ದಿ ಲಂಕೆಗೆ ತಿಳಿದು ಬಂದ ಕೂಡಲೇ ವಿಭೀಷಣ ತನ್ನ ಭಕ್ತನೊಡನೆ ರಾಮನಿಗೆ ಸುದ್ದಿಯೊಂದನ್ನು ತಿಳಿಸಲು ಯೋಚಿಸಿದ್ದ. ಆದರೆ ಆ ವ್ಯಕ್ತಿ ಸಮುದ್ರವನ್ನು ದಾಟುವುದು ಹೇಗೆ? ಎಂದು ಪ್ರಶ್ನಿಸಿದಾಗ ಅವನ ಸೆರಗಿನ ತುದಿಗೆ ಒಂದು ಮಂತ್ರವನ್ನು ಬರೆದು ಗಂಟಿಕ್ಕಿ ವಿಭೀಷಣ ಹೇಳಿದ – "ಇಗೋ ಈ ಸೆರಗಿನ ತುದಿಯಲ್ಲಿ ನಾನೊಂದು ಮಂತ್ರವನ್ನು ಬರೆದು ಕಟ್ಟಿದ್ದೇನೆ. ಅದರ ಸಹಾಯದಿಂದ ನೀನು ಸಮುದ್ರದ ಮೇಲೂ, ನೆಲದ ಮೇಲೆ ನಡೆದು ಹೋಗುವಂತೆ ಸುಲಭವಾಗಿ ನಡೆದು ದಾಟಬಲ್ಲೆ. ಆದರೆ ಎಚ್ಚರಿಕೆ, ನಡು ದಾರಿಯಲ್ಲಿ ಎಲ್ಲಾದರೂ ಈ ಮಂತ್ರವನ್ನು ಬಿಚ್ಚಿ ನೋಡೀಯೆ" ಎಂದು ಹೇಳಿ ಕಳಿಸಿಕೊಟ್ಟ.

ಅದರಂತೆ ಆ ವ್ಯಕ್ತಿ ರಾಮನನ್ನು ಕಂಡು ಬರಲು ಹೊರಟ. ಸಮುದ್ರದ ಮೇಲೆ ಅನಾಯಾಸವಾಗಿ ತಾನು ನಡೆದು ಹೋಗುತ್ತಿದ್ದಾಗ ಅವನಿಗೇ ಆಶ್ಚರ್ಯವಾಯಿತು: 'ಅಬ್ಬಾ ವಿಭೀಷಣ ಎಂಥ ಮಹಾತ್ಮ, ಎಷ್ಟು ಶ್ರೇಷ್ಠವಾದ ಮಂತ್ರ ಶಕ್ತಿ ಅವನಿಗೆ ಸಿದ್ಧಿಸಿದೆ. ಕೇವಲ ಒಂದು ಮಂತ್ರವನ್ನು ಅವನು ಈ ಸೆರಗಿನ ತುದಿಯಲ್ಲಿ ಬರೆದಿರುವುದರಿಂದ ನಾನು ನೀರಿನ ಮೇಲೆ ನಡೆದು ಹೋಗುವ, ಶಕ್ತಿ ಬಂದಿದೆಯಲ್ಲಾ' ಎಂದುಕೊಂಡ; ಕೂಡಲೇ ಅವನಿಗೆ ಅಷ್ಟೊಂದು ಮಹಿಮಾಪೂರ್ಣವಾದ ಮಂತ್ರ ಏನೆಂಬುದನ್ನು ನೋಡುವ ಆಸೆ ಪ್ರಬಲವಾಯಿತು. ವಿಭೀಷಣ ನೀಡಿದ್ದ ಎಚ್ಚರಿಕೆಯನ್ನು ಆತನು ಮರೆತು ಆ ಸೆರಗನ್ನು ಬಿಚ್ಚಿ ನೋಡಿದ. ಅದರಲ್ಲಿ 'ಶ್ರೀರಾಮ' ಎಂದಷ್ಟು ಮಾತ್ರವೇ ಇತ್ತು. ಅದನ್ನು ನೋಡಿದ ಆ ವ್ಯಕ್ತಿ ಅಂದುಕೊಂಡ "ಅಯ್ಯೋ ಇಷ್ಟೇನೇ" ಆ ಕೂಡಲೇ ಅವನು ಸಮುದ್ರದಲ್ಲಿ ಮುಳುಗಿ ಹೋದ.

ನಂಬಿಕೆ ಎನ್ನುವುದು ದೋಣಿಯೇ. ಅದು ಒಂದು ಸೋರೆ ಬುರುಡೆ ಇದ್ದಂತೆ. ಅದನ್ನು ಕಟ್ಟಿಕೊಂಡ ಎಂಥ ನದಿಯನ್ನಾದರೂ ನಾವು ಸುಲಭವಾಗಿ ಈಜಿ ದಡ ಸೇರಬಹುದು. ಆದರೆ ಅದಕ್ಕೆ ಅಶ್ರದ್ಧೆಯೆಂಬ ಕಲ್ಲಿನಿಂದ ಹೊಡೆದು ತೂತು ಮಾಡಿದರೆ ಅದಕ್ಕೆ ನೀರು ತುಂಬಿಕೊಂಡು ಅದನ್ನು ಆಶ್ರಯಿಸಿದ್ದವನನ್ನು ನೀರಿನಲ್ಲಿ ಮುಳುಗಿಸದೇ ಬಿಡದು.



ಇಂದು ನಾವಾದರೂ ನಂಬಿಕೆ ಎನ್ನುವ ಸೋರೆಬುರುಡೆಯನ್ನು ನಮ್ಮ ಉಪೇಕ್ಷೆಯ ಸ್ವಭಾವ ಹಾಗೂ ಅಂಧಶ್ರದ್ಧೆ ಎಂಬ ವಿಪರೀತ ಕಲ್ಪನಾ ಬುದ್ಧಿಯ ಕಲ್ಲಿನಿಂದ ಹೊಡೆದು ತೂತು ಮಾಡುತ್ತಿರುವುದೇ ಅಲ್ಲದೇ, ಅದರಲ್ಲಿ ನಂಬಿಕೆ ಇಟ್ಟು ಕಟ್ಟಿಕೊಂಡು ಈಜಿಕೊಂಡು ಹೋಗುತ್ತಿರುವ ಇತರರ ಬುರುಡೆಗೂ ಹೊಡೆದು ತೂತು ಮಾಡುತ್ತಿರುವುದರಿಂದ ಅವರೂ ದಾಟಲಾರರು, ನಾವೂ ದಾಟಲಾರೆವು. ಹೀಗಾಗಿ ನಂಬಿಕೆಯ ಬುರುಡೆಯೇ ಇಲ್ಲದೇ ಕರ್ತವ್ಯದ ನದಿಯನ್ನು ದಾಟಲಾರದೇ ನಾವು ಮುಳುಗುತ್ತಿದ್ದೇವೆ.



ಶ್ರೀ ಕೃ. ನ. ಮೂರ್ತಿ

ನಂಬದಿರ್ದನು ತಂದೆ ನಂಬಿದನು ಪ್ರಹ್ಲಾದ
ನಂಬಿಯುಂ ನಂಬದಿರುವಿಬ್ಬಂದಿ ನೀನು
ಕಂಬದಿನೊ ಬಿಂಬದಿನೋ ಮೋಕ್ಷವವರಿಂಗಾಯ್ತು
ಸಿಂಬಳದಿ ನೊಣ ನೀನು – ಮಂಕುತಿಮ್ಮ

ಕತ್ತಲೆಯೊಳೇನನೋ ಕಂಡು ಬೆದರಿದ ನಾಯಿ
ಎತ್ತಲೋ ಸುಖನೋರ್ವನಿಹನೆಂದು ನಂಬಿ
ಕತ್ತೆತ್ತಿ ನೋಡುತ ಬೊಗಳಿ ಹಾರಾಡುವುದು
ಭಕ್ತಿಯಂತೆಯೆ ನಮದು – ಮಂಕುತಿಮ್ಮ

– ಡಿ. ವಿ. ಜಿ.

( 16ನೇ ಪುಟದಿಂದ )

ನಿನಗೂ ಅಭಯವನ್ನು ಕೊಡುವುದು ತನ್ನ ವ್ರತವೆಂದು ತಿಳಿಸಿದರೂ ವಿಭೀಷಣ ಸಂಗ್ರಹಕ್ಕೆ ಹನುಮಂತನ ಪ್ರಚೋದನೆಯು ಮುಖ್ಯಕಾರಣ

ರಣರಂಗದಲ್ಲಿ ಆಂಜನೇಯನು ಪ್ರದರ್ಶಿಸಿದ ಪೌರುಷ ಆಶ್ಚರ್ಯಕರವಾದುದು ಯುದ್ಧದುದ್ದಕ್ಕೂ ಧೀರನಾದ ಹನುಮಂತನು ಮೋಡಗಳ ವೇಗದಿಂದ ಮರಗಳನ್ನುರುಳಿಸುತ್ತ ಪಾದಾಘಾತದಿಂದ ಭೂಮಿಯನ್ನು ನಡುಗಿಸುತ್ತ ವೃಕ್ಷಗಳಿಂದಪ್ಪಳಿಸಿ ಆನೆಗಳನ್ನು ಕೊಂದು ಮಾವುತರನ್ನು ಮರ್ದಿಸಿ ರಥಗಳನ್ನು ಪುಡಿಗೈದು ರಥಿಕರನ್ನು ಸಂಹರಿಸಿ, ಕಾಲಾಳುಗಳನ್ನು ವಧಿಸುತ್ತ, ಭೀಮ ಭಯಂಕರನಾಗಿರುತ್ತಿದ್ದ. ಮಹಾಬಲಶಾಲಿಗಳಾದ ಧೂಮ್ರಾಕ್ಷ, ಅಕಂಪನ ಮತ್ತು ನಿಕುಂಭರನ್ನು ತಾನೇ ಸಂಹಾರ ಮಾಡಿದ. ರಾವಣನ ಮೊದಲಿನ ಯುದ್ಧದಲ್ಲಿಯೂ ಕುಂಭಕರ್ಣನ ಘೋರ ಯುದ್ಧದಲ್ಲಿಯೂ ಅವನು ಪ್ರದರ್ಶಿಸಿದ ಸಾಹಸ ಅವರ್ಣನೀಯ.

ಇವೆಲ್ಲಕ್ಕಿಂತಲೂ ಹನುಮಂತನ ಪ್ರಾಧಾನ್ಯ ಕಾಣುವುದು ಇಂದ್ರಜಿತುವಿನ ಮಾಯಾ ಯುದ್ಧವಾದ ಮೇಲೆ, ರಾಮಲಕ್ಷ್ಮಣಾದಿ ಸಕಲ ನಾಯಕರೂ ಅನೇಕ ವೀರರೂ ಇಂದ್ರಜಿತುವಿನ ಮಾಯಾ ಯುದ್ಧದಿಂದ ಮೂರ್ಛೆ ಹೋಗುವರು. ಪೌಲಸ್ತ್ಯವಧೆ ಸಂಶಯಾಸ್ಪದವಾಗುತ್ತದೆ. ಆಗ ಸುಷೇಣನ ಸೂಚನೆಯಂತೆ ಹಿಮಾಲಯಕ್ಕೆ ಹೋಗಿ ಓಷಧಿಪರ್ವತವನ್ನು ತಂದು ಎಲ್ಲರೂ ಜೀವಂತರಾಗುವ ಹಾಗೆ ಮಾಡುತ್ತಾನೆ. ಅಲ್ಲದೆ ಯುದ್ಧ ಕಾಲದಲ್ಲಿ ಹನುಮಂತನು ರಾಮನಿಗೆ ವಾಹನವಾಗಿ ಸಹಾಯಮಾಡಿದನು

ರಾವಣವಧೆಯಾದ ಮೇಲೆ ಆಂಜನೇಯನೇ ಆ ಶುಭವಾರ್ತೆಯನ್ನು ಸೀತಾದೇವಿಗೆ ತಿಳಿಸಿ ಅವಳ ಶೋಕವನ್ನು ಪೂರ್ಣವಾಗಿ ನಿವಾರಣೆ ಮಾಡಿದನು. ಆ ಸಂದರ್ಭದಲ್ಲಿ ಅವರಲ್ಲಿ ನಡೆದ ಸಂಭಾಷಣೆಯು ಬಹು ಮನೋಹರವಾಗಿದೆ— ಹನುಮಂತ— 'ವೈದೇಹಿ, ರಾಮ ಕುಶಲಿಯಾಗಿದ್ದಾನೆ ಸುಗ್ರೀವ ಲಕ್ಷ್ಮಣರೂ ಕುಶಲಿಗಳಾಗಿದ್ದಾರೆ. ವಿಭೀಷಣನಿಂದಲೂ ವಾನರಸೈನ್ಯದಿಂದಲೂ ಪರಿವೃತನಾದ ರಾಮನು ಉದ್ದಿಷ್ಟಕಾರ್ಯವನ್ನು ಸಾಧಿಸಿ ಕೃತಕೃತ್ಯನಾಗಿ ತನ್ನ ಕುಶಲವನ್ನು ನಿನಗೆ ಹೇಳಿ ಕಳುಹಿಸಿದ್ದಾನೆ· ಮಿತ್ರರ ಸಹಾಯದಿಂದಾದ ವೈರಿಯ ಜಯದಿಂದ ಆನಂದ ತುಂದಿಲನಾದ ಶ್ರೀರಾಮನು ನಿನಗೆ ಈ ವಿಶೇಷ ಸಂದೇಶವನ್ನು ಕಳುಹಿಸಿದ್ದಾನೆ. ಏನೆಂದರೆ,—ದೇವಿ, ನಿನಗೆ ಸಂತೋಷದ ಸುದ್ದಿಯನ್ನು ಕಳುಹಿಸಿದ್ದೇನೆ. ಇದಕ್ಕಾಗಿ ನಿನ್ನನ್ನೂ ನಾನು ಅಭಿನಂದಿಸುವೆನು, ಎಲೇ ಧರ್ಮಜ್ಞೆ, ನನ್ನ ಭಾಗ್ಯದಿಂದ ನೀನು ಬದುಕಿರುವೆ. ಸೀತೆ, ನಮಗೆ ಯುದ್ಧದಲ್ಲಿ ಜಯವಾಯಿತು. ರಾವಣನ ವಧೆಯಾಯಿತು. ಲಂಕೆಯು ಕೈವಶವಾಯಿತು. ವಿಭೀಷಣನು ನಿನ್ನನ್ನು ಎದುರುಗೊಳ್ಳುವ ಸಲುವಾಗಿ ನಿನ್ನಲ್ಲಿಗೆ ಬರುವನು !

ಸೀತೆ—ಸೌಮ್ಯ, ಕಪಿ ಶ್ರೇಷ್ಠ, ಈ ಸಂತೋಷದ ಸುದ್ದಿಯನ್ನು ತಂದಿರುವ ನಿನಗೆ ಯಾವ ಮಾತಿನಿಂದ ಅಭಿನಂದಿಸಲೆಂದು ತಿಳಿಯದಾಗಿದೆ. ಈ ಪ್ರಿಯ—ಸಂದೇಶವನ್ನು ತಂದ ನಿನಗೆ ಪಾರಿತೋಷಕವಾಗಿ ಕೊಡಲು ಯಾವವಸ್ತುವೂ ಈ ಜಗತ್ತಿನಲ್ಲಿಯೇ ಇಲ್ಲ ಮೂರು ಲೋಕಗಳ ಆಧಿಪತ್ಯವೂ ಈ ಸುದ್ದಿಗೆ ಸಾಟಿಯಿಲ್ಲ.

ಹನುಮಂತ—ದೇವಿ, ಈ ನಿನ್ನ ಸಾರವತ್ತಾಗಿಯೂ ಸ್ನೇಹ ಪೂರ್ಣವಾಗಿಯೂ ಇರುವ ನುಡಿಯೇ ದೇವರಾಜ್ಯಕ್ಕೆ ಮಿಗಿಲಾದುದು. ಶ್ರೀರಾಮನು ವಿಜಯಶಾಲಿಯಾಗಿ ಸೌಖ್ಯವಾಗಿರುವುದನ್ನು ಕಣ್ಣಾರೆ ಕಾಣುವುದಕ್ಕಿಂತ ಬೇರೆ ಭಾಗ್ಯ ಬೇರೇನಿದೆ ?

ಸೀತೆ—ಶುದ್ಧವಾಗಿಯೂ ಮಧುರವಾಗಿಯೂ ನುಡಿಯುವುದರಲ್ಲಿ ನೀನೊಬ್ಬನೇ ನಿಪುಣ. ಅಷ್ಟಾಂಗ ಯುಕ್ತವಾದ ಬುದ್ಧಿಶಕ್ತಿಯಿಂದ ಮಾತನಾಡುವುದು ನಿನ್ನೊಬ್ಬನಿಗೆ ಮಾತ್ರಸಾಧ್ಯ. ವಾನರೋತ್ತಮ, ನೀನು ವಾಯುದೇವನ ಶ್ಲಾಘನೀಯನಾದ ಪುತ್ರನಾಗಿದ್ದೀಯೆ ಶ್ರಮ ಸಹಿಷ್ಣುತೆ, ಯುದ್ಧೋತ್ಸಾಹ, ವಿದ್ಯೆ, ಪರಾಕ್ರಮ, ಕಾರ್ಯದಕ್ಷತೆ, ತಾಳ್ಮೆ, ತೇಜಸ್ಸು, ಪ್ರಭಾವ, ಧೈರ್ಯ ವಿನಯ ಮುಂತಾದ ಮಹಾಗುಣಗಳು ನಿನ್ನಲ್ಲಿ ನೆಲಸಿವೆ

ಹನುಮಂತನಿಗೆ ಸೀತೆಗೆ ಚಿತ್ರಹಿಂಸೆಯನ್ನುಯನ್ನು ಕೊಟ್ಟ ರಾಕ್ಷಸಿಯರ ಮೇಲೆ ವಿಶೇಷ ಆಗ್ರಹ, ಅವರನ್ನು ನಾನಾ ರೀತಿಯಲ್ಲಿ ಹಿಂಸಿಸಿ ಕೊಂದು ಹಾಕುವುದಕ್ಕೆ ಸೀತೆಯ ಅನುಮತಿಯನ್ನು ಕೇಳುವನು. ಕರುಣಾಮಯಿಯಾದ ಸೀತಾ ದೇವಿಯು ಅವರು ರಾಜವಶ್ಯೆಯರಾದುದರಿಂದ ಹಾಗೆ ಮಾಡಿದರೆಂದೂ ಹಿಂಸೆಯು ಸತ್ಪುರುಷರಿಗೆ ಭೂಷಣವಲ್ಲವೆಂದೂ ತಿಳಿಸಿದಾಗ ಸೀತೆಯು ರಾಮನಿಗೆ ಅನುರೂಪಳಾದ ಭಾರ್ಯೆಯೆಂದು ಕೊಂಡಾಡಿದನು

ಕೊನೆಗೆ ರಾಮನು ಅಯೋಧ್ಯೆಗೆ ಬರುವ ವಿಷಯವನ್ನು ಭರದ್ವಾಜಾಶ್ರಮದಿಂದ ಅಯೋಧ್ಯೆಯಲ್ಲಿದ್ದ ಭರತನಿಗೆ ತಿಳಿಸಿ ಅವನ ಅಪಾರ ಸಂತೋಷಕ್ಕೆ ಕಾರಣನಾದವನೂ ಆಂಜನೇಯನೇ.

ರಾಮನ ಪಟ್ಟಾಭಿಷೇಕವಾಯಿತು. ಸಭೆಯಲ್ಲಿ ಎಲ್ಲರಿಗೂ ಉಡುಗೊರೆಯ ವಿನಿಯೋಗವಾಗುವ ಸಮಯ. ಪಟ್ಟಾಭಿಷಿಕ್ತರಾದ ಸೀತಾರಾಮರ ಎದುರಿಗೆ ಆಂಜನೇಯನು ಕುಳಿತಿದ್ದಾನೆ. ಸೀತಾದೇವಿಗೆ ಎಲ್ಲರಿಗಿಂತಲೂ ಮೊದಲು ವಾಯುಪುತ್ರನಿಗೆ ಮೆಚ್ಚು ಕೊಡಬೇಕೆಂದು ಉತ್ಸಾಹ. ತನ್ನ ಕೊರಳಿನಿಂದ ಒಂದು ಹಾರವನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ಭರ್ತಾರನ ಮುಖವನ್ನು ಪುನಃ ಪುನಃ ನೋಡಿದಳು ಅವಳ ಇಂಗಿತವನ್ನು ತಿಳಿದ ರಾಮಚಂದ್ರನು,

ಪ್ರದೇಹಿ ಸುಭಗೇ ಹಾರಂ
ಯಸ್ಯ ತುಷ್ಟಾಸಿ ಭಾಮಿನೀ ।
ತೇಜೋ ಧೃತಿರ್ಯಶೋದಾಕ್ಷ್ಯಂ
ಸಾಮರ್ಥ್ಯಂ ವಿನಯೋನಯಃ ॥
ಪೌರುಷಂ ವಿಕ್ರಮೋ ಬುದ್ಧಿಃ
ಯಸ್ಮಿನ್ನೇತಾನಿ ಸರ್ವಶಃ ॥

ಎಂದು ಹೇಳಿದ. ಆದರಿಂದ ತೃಪ್ತಳಾದ ಜಾನಕಿ ಆ ಹಾರವನ್ನು ವಾಯುಪುತ್ರನ ಕೊರಳಿಗೆ ಹಾಕಿದಳು ಅದನ್ನು ಧರಿಸಿದ ಹನುಮಂತನು ಶ್ವೇತಾಭ್ರದಿಂದ ಆವರಿಸಲ್ಪಟ್ಟ ಪರ್ವತದಂತೆ ಪ್ರಕಾಶಿಸಿದನು. ಇದರಿಂದ ರಾಮ, ಸೀತೆ, ಹನುಮಂತ—ಎಲ್ಲರಿಗೂ ತೃಪ್ತಿಯಾಯಿತು. ರಾಮಾಯಣದ ಮೂಲೋದ್ದೇಶಗಳಾದ ರಾಮಮಹಿಮೆಯ ಪ್ರಕಾಶನ, ಸೀತಾದೇವಿಯ ಮಹತ್ ಚರಿತ್ರೆಯ ಆವಿಷ್ಕರಣ, ಪೌಲಸ್ತ್ಯವಧೆ ಈ ಮೂರೂ ಸಂಪೂರ್ಣವಾಯಿತು.

ಶ್ರೀಮದ್ರಾಮಾಯಣವು ಶರಣಾಗತಿ ಪ್ರಧಾನವಾದ ಗ್ರಂಥ ಆ ತತ್ತ್ವದಲ್ಲಿ ಆಚಾರ್ಯನಿಗೆ ಪ್ರಧಾನವಾದ ಸ್ಥಾನ, ಪರಮಾತ್ಮನು ಆಚಾರ್ಯನ ಮೂಲಕ ಜೀವಾತ್ಮನಿಗೆ ಸಂದೇಶವನ್ನು ಕಳುಹಿಸಿ ಜೀವಾತ್ಮನನ್ನು ತನ್ನಲ್ಲಿಗೆ ಬರಮಾಡಿಕೊಳ್ಳುವನು. ಈ ತತ್ತ್ವದ ಪ್ರಕಾರ ಜೀವಾತ್ಮ ಪರಮಾತ್ಮ ಸಂಶ್ಲೇಷಕ್ಕೆ ಸಿದ್ಧಪಡಿಸಿದವನು, ಸಕಲಗುಣ ಪರಿಪೂರ್ಣನಾದ ಆಚಾರ್ಯಸ್ಥಾನದಲ್ಲಿರುವ ಹನುಮಂತ

ಆಂಜನೇಯ ಚಿರಂಜೀವಿ. ಎಲ್ಲೆಲ್ಲಿ ರಘುನಾಥ ಕೀರ್ತನೆ ನಡೆಯುವುದೋ ಅಲ್ಲೆಲ್ಲ ಕೃತ ಮಸ್ತಕಾಂಜಲಿಯಾಗಿ, ಭಾಷ್ಪವಾರಿ ಪರಿಪೂರ್ಣ ನೇತ್ರನಾಗಿ ಅದರಲ್ಲಿ ಭಾಗವಹಿಸುವುದೇ ಅವನ ಜೀವನದ ಸರ್ವಸ್ವ ಅವನು ಧನ್ಯನಾದ ರಾಮದೂತ.

ಯತ್ರ ಯತ್ರ ರಘುನಾಥ ಕೀರ್ತನಂ
ತತ್ರ ತತ್ರ ಕೃತಮಸ್ತಕಾಂಜಲಿಂ ।
ಬಾಷ್ಪವಾರಿ ಪರಿಪೂರ್ಣಲೋಚನಂ
ಮಾರುತಿಂ ನಮತ ರಾಕ್ಷಸಾಂತಕಂ ॥



# ಗೃಹಲಕ್ಷ್ಮಿ

# ಸಹಾಯಕ - ಸ್ವರೂಪ

ಆಗತಾನೆ ತಾಯಿಯು ಹಾಲು ಬಿಡಿಸಿದ ಮಗುವಿಗೆ ಊಟ ಮಾಡಿಸುವುದೆಂದರೆ ಆನಂದ. ಮಗುವಿಗೆ ಏನಾದರೂ ಮಾಡಿ ಹೊಟ್ಟೆಯ ತುಂಬ ಊಟ ಮಾಡಿಸಬೇಕೆನ್ನುವ ಹಂಬಲ ತಾಯಿಗೆ. ಕಾಗೆ– ಗುಬ್ಬಿಗಳನ್ನು ತೋರಿಸಿ. ನಾಯಿ ಬೆಕ್ಕುಗಳನ್ನು ತೋರಿಸಿ. ನಗಿಸಿ ಮುದ್ದಾಡಿಯಾದರೂ ಬೇಸರವಿಲ್ಲದೆ ಆಗೊಮ್ಮೆ ಈಗೊಮ್ಮೆ, ಮಗುವಿನ ಬಾಯಿಗೆ ತುತ್ತಿಡುತ್ತಿರುತ್ತಾಳೆ. ತಾಯಿ ಮಾಡುವ ಈ ಕೆಲಸವನ್ನು ತಾನು ಮಾಡಬೇಕೆನ್ನುವ ಚಪಲದಿಂದ ತಟ್ಟೆಯೊಳಗಣ ಅನ್ನವನ್ನು ಒಮ್ಮೆ ತನ್ನ ಪುಟ್ಟ ಕೈಗಳಿಂದ ತಾಯಿಯ ಬಾಯೊಳಗೆ ಇಟ್ಟಾಗ ಆ ತಾಯಿ ಅದನ್ನು ಎಂಜಲೆಂದು ನಿರಾಕರಿಸಿಯಾಳೇ? ಇಷ್ಟು ದೊಡ್ಡವಳಾದ ನನಗೆ ಈ ನಾಲ್ಕಗುಳು ಅನ್ನ ಉಣ್ಣಿಸುವುದೇ ಎಂದು ಅಪಹಾಸ್ಯದಿಂದ ನಕ್ಕಾಳೆ? ಎಂದೂ ಇಲ್ಲ. ತನ್ನ ಮುದ್ದು ಕಂದಮ್ಮನ ಕೈಯಿಂದ ಬಾಯಲ್ಲಿ ಬಿದ್ದ ನಾಲ್ಕಗುಳು ಅನ್ನ ಅವಳಿಗೆ ಪರಮಾನಂದದಾಯಕನಾದ ಅಮೃತ ಪ್ರಾಯವೆನಿಸುವುದು. ಆ ತಾಯಿ ಅನುಭವಿಸುವ ಆ ಸಂತೃಪ್ತ ಮನೋಭಾವ ವರ್ಣನಾತೀತ.

ಇದುವೇ ಮೂರ್ತಿ ಪೂಜೆಯ ತಿರುಳು. ತ್ರಿಕರಣ ಶುದ್ಧಿಯುಂಟಾಗಿ. ಅಂತಃಕರಣ ತುಂಬಿ ಹೃದಯ ವಿಶಾಲವಾಗಿ, ನಿರ್ಮಲ ತೇಜಸ್ಸು ಹೆಚ್ಚು ಹೆಚ್ಚುತ್ತಾ, ಅಹಂಕಾರ ಅಳಿಯುವುದೇ ಮೂರ್ತಿಯ ಪೂಜೆಯ ಪರಿಣಾಮ. ಕೃತಜ್ಞತೆಯ ಸುಂದರ ಕಲ್ಪನೆಯೇ ಇದು.

ವಿಶ್ವವೇ ಮಂದಿರವಾಗಿ, ಸಮುದ್ರವನ್ನು ಉಕ್ಕೇರಿಸಿ, ನದಿ – ಕೆರೆಗಳನ್ನು ತುಂಬಿ ತುಳುಕಿಸಿ, ಮೇಘಗಳನ್ನು ಹುಟ್ಟಿಸಿ, ಮಳೆಗರೆದು ಸೃಷ್ಟಿಸಿ, ಅಭಿಷೇಕಗೈದು, ಅಗಣಿತ ಪುಷ್ಪಗಳ ಸುಗಂಧವನ್ನು ಇಡೀ ಪ್ರಕೃತಿಗೆ ಧೂಪವಾಗಿಸಿ ಅಸಂಖ್ಯಾತ ತಾರಾಗಣಗಳ, ದೀಪ ಕೋಟಿ ಸಿರಿಸಿರಿಯಾದ ಹಣ್ಣುಹಂಪಲು, ಕಂದ ಮೂಲಗಳ ನೈವೇದ್ಯಗೈದು, ಸೂರ್ಯ ಚಂದ್ರರ ನೀರಾಜನಾರತಿ ಬೆಳಗುವ, ಪ್ರಕೃತಿಯಂತಲೇ ಪೂಜಾ ಕ್ರಮವನ್ನು ಪ್ರತಿ ನಿಮಿಷ ಸೆಕೆಂಡುಗಳಲ್ಲಿಯೂ ಬೋಧಿಸುವ ವಿಶ್ವದೇವನಿಗೆ. ಒಂದು ಉದ್ಧರಣೆ ನೀರಿನಿಂದ ಅಸಂಖ್ಯ ನದಿ ನದಗಳ ನಾಮಸ್ಮರಣೆ ಮಾಡುತ್ತಾ ಅಭಿಷೇಕ ಮಾಡಿ. ಹೂವ್ವ ಸುಗಂಧ, ಧೂಪ. ದೀಪ, ನೈವೇದ್ಯಗಳಿಂದ ಅರ್ಚನೆ ಗೈಯುವುದೆಂದರೆ, ವಿಶ್ವವ್ಯಾಪಿಯಾದ ಆ ಮಹಾ ಮಹಿಮನಿಗೆ ನಮ್ಮ ಹೃದಯದಲ್ಲಿ ತುಂಬಿರುವ ಕೃತಜ್ಞತಾ ಭಾವವನ್ನು ವ್ಯಕ್ತ ಪಡಿಸುವ ಉಪಕಾರ ಸ್ಮರಣೆ ಮಾತ್ರ. ಮೂರ್ತದಿಂದ ಅಮೂರ್ತವೆಡೆಗೆ, ವ್ಯಕ್ತದಿಂದ ಅವ್ಯಕ್ತದೆಡೆಗೆ, ದ್ವೈತದಿಂದ ಅದ್ವೈತದತ್ತ ಮಾನವನನ್ನು ಕೈ ಹಿಡಿದು, ಮನುಜನ ಅನಂತ–ಅಡಗಿದ ಆನಂದವನ್ನು ಚೈತನ್ಯ ತತ್ತ್ವದಲ್ಲಿ ಐಕ್ಯ ಗೊಂಡು, ಆನಂದಾನುಭವವನ್ನು ಹೊಂದಲು ಸಾಧಕನಾಗುವ ಮೊದಲ ಹೆಜ್ಜೆಯೇ ಮೂರ್ತಿ ಪೂಜೆ.

ಮಣೆಕಟ್ಟಿನ ಸಹಾಯದಿಂದ ಲೆಖ್ಖ ಮಾಡುವುದನ್ನು ಕಲಿತ ಮಗು ಪೃಗ್ಗಣಿತ ಶಾಸ್ತ್ರ ಪ್ರವೀಣನಾಗುವಂತೆ ಮೃಣ್ಮಯ ಮೂರ್ತಿಯು ನೆಪ ಮಾಡಿ. ಚಿನ್ಮಯೀ ದೇವನ ಸಾಕ್ಷಾತ್ಕಾರ ಮಾಡಿ ಕೊಳ್ಳುವ ವಿಶಾಲ ತತ್ತ್ವವೇ ಮೂರ್ತಿ ಪೂಜೆಯ ಹೆಸರಿನಿಂದ. ಅಸತ್ಯದಿಂದ ಸತ್ಯಕ್ಕೆ, ತಮಸ್ಸಿನಿಂದ ಜ್ಯೋತಿರ್ಮಯ ಮಹಾ ವಿಭವಕ್ಕೆ, ಮೃತ್ಯುವಿನಿಂದ ಅಮೃತತತ್ತ್ವಕ್ಕೆ ಕರೆದೊಯ್ದು ಮಾನವ ಮಾತ್ರನನ್ನು ಸಾಕ್ಷಾತ್ ದೇವನಾಗಿಸಿ, ಸನಾತನ ಸಂಸ್ಕೃತಿಯ ಸಾರ ಸರ್ವಸ್ವವನ್ನು ಅರಿಯಲು ಸಾಧನ ಮಾತ್ರವಾಗಿರುವ ಸಹಾಯಕ ಸ್ವರೂಪ.

—

**ಶ್ರೀಮತಿ ಪಾರ್ವತಿ**
**ಕೃ. ನ. ಮೂರ್ತಿ**

ಎಲ್ಲಾಡಿ ಬಂದ್ಯೋ ಎನ್ನ ರಂಗಯ್ಯಾ ನೀ
ಎಲ್ಲಾಡಿ ಬಂದ್ಯೋ ಎನ್ನ ಕಣ್ಣ ಮುಂದಾಡದೆ ॥ ಪ ॥

ಆಲಯದೊಳಗೆ ನೀನಾಡದೆ ಚಿನಿ
ಪಾಲು ಸಕ್ಕರೆ ನೀನೊಲ್ಲದೆ ಚಿಕ್ಕ
ಬಾಲೆಯರೊಡನೆ ಕೂಡ್ಯಾಡದೆ ಮುದ್ದು
ಬಾಲಯ್ಯ ನೀ ಎನ್ನ ಕಣ್ಣ ಮುಂದಾಡದೆ ೧

ಒಳ್ಳೆ ಮುತ್ತಿನ ಬೊಗಸೆ ಕಂಗಳು ಪಣೆಯೊ
ಳಿಟ್ಟ ಕಸ್ತೂರಿ ತಿಲಕದಂದವು ಅಲ್ಲೆ
ದಿಟ್ಟ ತನದಿ ಕೂಡ್ಯಾಡಲು
ಪುಟ್ಟ ಕೃಷ್ಣಯ್ಯ ನೀ ಎನ್ನ ಕಣ್ಣ ಮುಂದಾಡದೆ ೨

ಅಷ್ಟು ದಿಕ್ಕಲಿ ಅರಸಿ ಕಾಣದೆ ಬಹಳ
ದೃಷ್ಟಿ ಗೆಟ್ಟೆನು ನಿನ್ನ ನೋಡದೆ ಇ
ನ್ನೆಷ್ಟು ಹೇಳಲಿ ಕೇಳಬಾರದೆ ರಂಗ
ವಿಠಲ ನೀ ಎನ್ನ ಕಣ್ಣ ಮುಂದಾಡದೆ ೩

– ಶ್ರೀಪಾದರಾಜರು

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಛತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಟಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಜೈಮಿನಿ ಭಾರತದಲ್ಲಿ ಸುಧನ್ವ

ಕವಿ ಲಕ್ಷ್ಮೀಶ ತನ್ನ 'ಜೈಮಿನಿ ಭಾರತ' ಕಾವ್ಯವನ್ನು "ಪುಣ್ಯಮಿದು ಕೃಷ್ಣಚರಿತಾಮೃತಂ" ಎಂದು ಹೇಳಿಕೊಂಡಿದ್ದಾನೆ. ಅದರಂತೆಯೇ ಜೈಮಿನಿ ಭಾರತದಲ್ಲಿ. ಅನೇಕ ಕೃಷ್ಣ ಭಕ್ತರ ಕಥೆಗಳು ಬರುತ್ತವೆ. ಸಂಸ್ಕೃತದ ಜೈಮಿನಿ ಭಾರತದ. ಸಂಗ್ರಹವೇ ಆಗಿದೆ. ಲಕ್ಷ್ಮೀಶನ 'ಜೈಮಿನಿ ಭಾರತ'. ಕವಿ ಲಕ್ಷ್ಮೀಶ ಕಥನಕಲೆಯಲ್ಲಿ, ಅದ್ಭುತವಾದ ಪರಿಣತಿಯನ್ನು ಪಡೆದಿದ್ದನೆಂಬುದಕ್ಕೆ ಸಾಕ್ಷಿಯೋ ಎಂಬಂತೆ ಅನೇಕ ಸುಂದರವಾದ ಕಥೆಗಳು ಜೈಮಿನಿ ಭಾರತದಲ್ಲಿ ಬಂದಿವೆ. ಅಂತಹ ಸುಂದರವಾದ ಕಥೆಗಳಲ್ಲಿ, ಕೃಷ್ಣನ ಅನನ್ಯ ಭಕ್ತನಾದ ಸುಧನ್ವನ ಕಥೆಯು ಮನ ಸೆಳೆಯುವಂತಹುದಾಗಿದೆ.

ಕೃಷ್ಣಾರ್ಜುನರ ಸಮಸ್ತ ಸೈನ್ಯವೂ, ಅಶ್ವಮೇಧಯಾಗದ ಕುದುರೆಯ ಬೆಂಗಾವಲಿಗೆ ನಿಂತು, ದಾರಿಯಲ್ಲಿ ಎದುರಾದ ದೊರೆಗಳನ್ನೆಲ್ಲಾ ಪರಾಭವಗೊಳಿಸುತ್ತಾ ಮುಂದುವರಿಯುತ್ತಿದೆ. ರಾಜ ಹಂಸಧ್ವಜನ ಕೋಟೆಯ ಬಳಿಗೆ ಅರ್ಜುನನ ಸೈನ್ಯ ಕುದುರೆಯೊಡನೆ ಬಂದುಬಿಟ್ಟಿತು.

ಪ್ರಾರಂಭದಲ್ಲೇ ಯುದ್ಧವಿಲ್ಲದೆ ಅರ್ಜುನನ ಬಳಿ ದಾಸ್ಯವನ್ನು ಸ್ವೀಕರಿಸಿ ಕಪ್ಪಕಾಣಿಕೆಗಳನ್ನು ಕೊಡುವುದು ರಾಜನಿಗೆ ಇಷ್ಟವಿಲ್ಲ. ರಾಜ ಯುದ್ಧಕ್ಕೆ ಹೊರಡುವಂತೆ ಪ್ರತಿಯೊಬ್ಬ ವೀರನಿಗೂ ಆದೇಶ ನೀಡಿದ್ದಾನೆ. ಯುದ್ಧಕ್ಕೆ ಹೊರಡುವ ಸಮಯದಲ್ಲಿ ಯಾರೂ ಯಾವುದೇ ನೆಪದಿಂದ ತಡವಾಗಿ ಬರುವುದಾಗಲಿ, ತಪ್ಪಿಸಿಕೊಳ್ಳುವುದಾಗಲಿ ಮಾಡಬಾರದು. ಹಾಗೆ ಮಾಡಿದವರಿಗೆ ಕ್ರೂರವಾದ ಶಿಕ್ಷೆ ವಿಧಿಸಲಾಗುತ್ತದೆ. ರಾಜಾಜ್ಞೆಗೆ ಹೆದರಿ ನಿಶ್ಚಿತ ಸಮಯಕ್ಕೆ ಎಲ್ಲಾ ವೀರರೂ ಬಂದು ಸೇರಿದರು. ಆದರೆ ರಾಜನ ಅರಮನೆಯಲ್ಲಿಯೇ ರಾಜನ ಆಜ್ಞೆಯನ್ನು ಪಾಲಿಸದೆ ಭಂಗಿಸುವ ಕೃತ್ಯವೊಂದು ನಡೆದು ಹೋಯಿತು. ಅದು ನಡೆದದ್ದು ರಾಜನ ಮುದ್ದಿನ ಮಗನಾದ ರಾಜಕುಮಾರ ಸುಧನ್ವನಿಂದ.

ಹೃದಯ ಸ್ಪರ್ಶಿಯಾಗುವಂತೆ ಲಕ್ಷ್ಮೀಶ ಕಥೆ ಹೇಳತೊಡಗುತ್ತಾನೆ. ಆ ರಸವತ್ತಾದ ಭಾಗಗಳನ್ನು ಓದಿದರೇ ಮೈಯೆಲ್ಲಾ ರೋಮಾಂಚನಗೊಳ್ಳುತ್ತದೆ. ಸುಧನ್ವನೂ ಯುದ್ಧವೇಷ ಧರಿಸಿ, ಯುದ್ಧಕ್ಕೆ ಹೊರಡಲು ಸಿದ್ಧವಾಗಿ ರಾಜಮಾತೆಗೂ, ತಂಗಿಯಾದ ಕುವಲೆಗೂ ಹೇಳಿ ಹೊರಡುತ್ತಾನೆ. ನಂತರ ತನ್ನ ಪ್ರಿಯಪತ್ನಿಯಾದ ಪ್ರಭಾವತಿಯನ್ನು ನೋಡಬೇಕೆಂದು ಕೊಳ್ಳುತ್ತಿರುವಾಗಲೇ ಆಕೆ ಎದುರಿಗೆ ಬರುವಳು.

ಶ್ರೀ ಕೆ. ರಮಾನಂದ ಎಂ.ಎ,

ಮುಡಿಯ ಪೊಸಮಲ್ಲಿಗೆಯ ಸೂಸುವೆಳೆ
ನಗೆಯ ಸವಿ
ನುಡಿಯ, ಬಾಯ್ದೆರೆಯ, ಹೊಳೆ
ಹೊಳೆವ ದಶನದ ಮಿಸುಪ
ಕಡೆಗಣ್ಣ, ತೊಳಗುವ ನಖಾವಳಿಯ,
ಥಳಥಳಿಪ ಕಂಠ ಮಾಲೆಯ ಮುತ್ತಿನ ॥
ತೊಡವುಗಳ ಘನಸಾರದನುಲೇಪನದ
ಸಣ್ಣ
ಮಡಿ ದುಕೂಲದ ಬೆಳ್ಪಗಕೋರ್ವ
ಲಾಂಗದೊ
ಳ್ಪಿಡಿದೆ ಪಸರಿಸೆ ಚಂದ್ರಕಾಂತದಿಂ
ನಿರ್ಮಿಸಿದ ಪುತ್ಥಳಿವೊಲವಳೆಸೆದಳು ॥

ಸುಂದರಿಯಾದ ರಾಣಿಯನ್ನು ಕಂಡು ಸುಧನ್ವ ಹೇಳಿದ. "ಕಾಂತೆ! ಕೇಳೆಂದು ಸಮರದೊಳರ್ಜುನಂಗೆ ಮಾರಾಂತು ಅವನ ಬಿಂಕವನ್ನು ಮುರಿಯುವೆ. ನನ್ನ ಭುಜವಿಕ್ರಮವೆಷ್ಟೆಂದು ಪ್ರದರ್ಶಿಸುವೆ. ಕೊನೆಗೆ ಮುದ್ದಿನ ಮಡದಿಗೆ ಸುಧನ್ವ ಹೇಳಿದ "ನಾಂ ತಳೆವೆನಾರ್ಪಿಂದ ವಿಜಯಂ, ಮೀರ್ದೊಡೆ ಭವಾಂತರವನೈದಿಸುವ ಯುಕ್ತಿಯಿಂ ಪಡೆದಪೆಂ, ನೀಂ ತಳಮಳಿಸಿದಿರ್" ಪತಿ ಹೀಗೆ ಹೇಳಿದೊಡನೆ ಯಾವ ಪತ್ನಿ ತಾನೇ ತಳಮಳಿಸದೆ ಸುಮ್ಮನಿದ್ದಾಳು. ಪ್ರಭಾವತಿಗೆ ಚೆನ್ನಾಗಿ ಗೊತ್ತು. ಯುದ್ಧಕ್ಕೆ ತೆರಳುವ ಪತಿ ಅದರಲ್ಲೂ ಎದುರು ಪಕ್ಷದಲ್ಲಿ ಕೃಷ್ಣನಿರುವಾಗ – ಖಂಡಿತ ಜಯವನ್ನು ಪಡೆಯಲಾರನೆಂದು. ಮೂಲದಲ್ಲಿ ಅವಳಿಗೆ ಸಂತಾನಾಪೇಕ್ಷೆಯೂ ಉಂಟು. ಯುದ್ಧಕ್ಕೆ ತೆರಳಿ ಗಂಡ ಮಡಿದರೆ - ಆಗ ತಾನು ಹೇಗಿರಬೇಕು. ಜೊತೆಗೇ ತನ್ನ ಬಯಕೆಯನ್ನು ಈಡೇರಿಸಿದರೆ. ಆಕೆ ಸ್ಪಷ್ಟವಾಗಿ, ದಿಟ್ಟತನದಿಂದ ಹೇಳಿ ಬಿಟ್ಟಳು.

ಯುಕ್ತವಲ್ಲಿದು ರಮಣ ನಿನಗೆ
ಕೇಳ್ಮಾದುವಾ
ಸಕ್ತಿಯಿಂ ಚಕ್ರಿಗಭಿಮುಖನಾದ ಒಳಿಕಲ್ಲಿ
ಮುಕ್ತಿಯಲ್ಲದೆ ಬೇರೆ ಜಯವುಂಟೆ?
ಜನಿಸದು ವಿವೇಕ ಸಂತತಿ ನಿನ್ನೊಳು ॥
ವ್ಯಕ್ತದಿಂ ತನಗೊಂದಪತ್ಯಮುಲ
ದಯಿಸದೊಡೆ ವಿ
ರಕ್ತಿಯಿಂ ಕೈವಲ್ಯಮಾದಪುದೆ ಸಮರಕು
ದ್ಯುಕ್ತನಪ್ಪಾತಂಗೆ ಸಂತಾನವಿಲ್ಲದಿರಲ್ಲ
ಪ್ಪುದೇ? ಹೇಳೆಂದಳು ॥

ಸುಧನ್ವ ಪತ್ನಿಯ ಈ ಮಾತಿನ ವೇಗಕ್ಕೆ ಸೋತನು. ಅವಳ ಈ ಪರಿಯ ಚಿಂತನೆಗೆ ಬೆರಗಾದನು. ತಾನು ಮಡಿದನಂತರ, ಸಂತತಿ ಹೀನನಾದುದರಿಂದ ದೊರೆಯಬಹುದಾದ ಪಾಪಗಳಿಗೆ ಅಂಜಿದನು. ಪ್ರಭಾವತಿ ಹೇಳಿದುದರಲ್ಲಿ ಏನೂ ತಪ್ಪಿಲ್ಲವೆಂದು ಅವನಿಗೆ ಅನಿಸಿತು. ಕೊನೆಗೆ ಪತಿಯನ್ನು ಯುದ್ಧ ವಿಮುಖನನ್ನಾಗಿ ಮಾಡುವಲ್ಲಿ ಪ್ರಭಾವತಿ ಸಫಲೆಯಾದಳು. ಶೃಂಗಾರ ನಿಪುಣೆಯಾದ ಆಕೆಯೊಡನೆ ರಾಜಕುಮಾರ ಸುಧನ್ವನು ರಮಿಸಿದನು. ಇದು ಅವನ ತಪ್ಪೆ! ಇಲ್ಲ ಪ್ರಭಾವತಿಯ ತಪ್ಪೆ! ಅಂತೂ ರಾಜನರಮನೆಯಲ್ಲಿ ಇಂತಹ

(31 ನೇ ಪುಟ ನೋಡಿ)

# ಓಡೋಡಿ ಬಂದೆ



ಓಡೋಡಿ ಬಂದೆ ನಿನ್ನ ಸೇವೆಗೆಂದೆ
ನಿನ್ನ ಮಹಿಮೆ ಅರಿಯದೆ ನೊಂದೆ

ಬಳಲಿದೆ ಸಂಸಾರ ಸಾಗರದೊಳಗೆ
ಸಿಲುಕಿದೆ ವ್ಯಾಮೋಹ ಬಂಧನದೊಳಗೆ
ಸಲಹುವರಾರು ಈ ಸಂತೆಯೊಳಗೆ
ಶ್ರೀರಾಮ ದೂತನೆ ಶರಣಾದೆ ನಿನಗೆ

ಕಳೆದೆನು ಕಾಲವ ನೆನೆಯದೆ ನಿನ್ನ
ಕಾಯವು ಸ್ಥಿರವೆಂದು ನಂಬಿದ ಎನ್ನ
ಕಾಲನ ದೂತರು ಸೆಳೆಯುವ ಮುನ್ನ
ಪವನ ಕುಮಾರನೆ ಆಗು ಪ್ರಸನ್ನ

ಕ್ಷೇತ್ರವು ಆಯಿತು ಮಹಲಕ್ಷ್ಮಿಪುರವು
ಮಾರುತಿ ಬಂದು ನೆಲಸಿದ ಸ್ಥಳವು
ಬೇಡಿದ ಭಕ್ತರ ಕಲ್ಪವೃಕ್ಷವು
ಹನುಮನ ಸೇವೆಯೆ ಎಮ್ಮಯ ಭಾಗ್ಯವು

**ಹನುಮದಾಸ ಸೇ. ವೆ. ಕೃ.**

(29 ನೇ ಪುಟದಿಂದ)

ಇಂತಹ ಘಟನೆ ನಡೆಯಿತು. ಎಲ್ಲರೂ ಯುದ್ಧ ಸನ್ನದ್ಧರಾಗಿರುವಾಗ ಕುಮಾರನಿಲ್ಲದ್ದನ್ನು ಕಂಡು ರಾಜ ಹಂಸಧ್ವಜನು ಅವನನ್ನು ಹುಡುಕಿಸಿ, ಬಂಧಿಸಿ ತರಿಸಿದನು. ನಿಜ ಹೊರಬಂದಿತು. ರಾಜಕುಮಾರನು ತಾನು ಪ್ರಭಾವತಿಯ ಅರಮನೆಯಲ್ಲಿದ್ದುದನ್ನು ತಿಳಿಸಿದನು. ರಾಜಾಜ್ಞೆಯಂತೆ ಪುರೋಹಿತರಾದ ಶಂಖಲಿಖಿತರು ಬಂದರು. ರಾಜನಿಂದ ವಿಷಯವರಿತರು. ಒಡನೆ ಕುಮಾರನಿಗೆ ಶಿಕ್ಷೆ ನಿಯೋಜಿಸಲುದ್ಯುಕ್ತರಾದರು. ರಾಜ ಮಗನೆಂಬ ಮೋಹದಿಂದ ಶಿಕ್ಷೆ ನೀಡದಿದ್ದರೆ – ಒಡನೆ ಹೇಳಿದರು. 'ತನಯನ ಮೇಲಣಾಶೆ ಯಿಂದ ಭಾಷೆದಪ್ಪಿದರೆ ಈ ಚಂಪಕಾಪುರದಲ್ಲಿ ನಾವು ಇರುವುದಿಲ್ಲ.' ಮೇಲೆ ಅವರು ಹೇಳಿದ ನೀತಿ ಮಾತಾದರೂ ಯಾವುದು? "ಸತ್ಯಾಚರಣೆಗಾಗಿ ರುಕ್ಮಾಂಗದ ಹರಿಶ್ಚಂದ್ರ ಭೂಚಕ್ರಪಾಲರಾತ್ಮಜ ಮೊಗನೋಡಿದರೆ?", "ಇವನ ಎರಡೂ ಕೈಗಳನ್ನೂ ಕಟ್ಟಿ ತಕತಕ ಕುದಿಯುವ ಎಣ್ಣೆ ಕೊಪ್ಪರಿಗೆಗೆ ಹಾಕಿರಿ" ಎಂದು ಅರಸ ಆಜ್ಞೆ ಮಾಡಿದ. ನೆರೆದಿದ್ದವರೆಲ್ಲರೂ ಬೆದರಿದರು. ಅಯ್ಯೋ! ರಾಜಕುಮಾರನಿಗೆ ಈ ಗತಿಯೇ. ಇಂತಹ ಕ್ರೂರ ಶಿಕ್ಷೆಯೇ ಎಣ್ಣೆ ಕೊಪ್ಪರಿಗೆಗೆ ಅವನನ್ನು ಹಾಕಿಸುವ ಸಚಿವನೇ ಅತಿಯಾಗಿ ನೊಂದನು. ರಾಜಕುಮಾರನ ಸಮಸ್ತ ಗುಣಗಳನ್ನೂ ನೆನೆದನು ಸದ್ಗುಣಗಳ ಗಣಿಯೇ ಆಗಿದ್ದ ರಾಜಕುಮಾರ. "ಲೋಕೈಕ ವಿಖ್ಯಾತಾಭಿಧಾನಿ, ಹರಿಸೇವಕಂ, ಸುಂದರಂ ಮಾತಾ ಪಿತೃ ಪ್ರಿಯಂ, ಕೋವಿದಂ, ಕೋಮಲಂ, ಸುಖಿ, ಸಕಲ ಸಜ್ಜನ ಸಖಂ, ನೀತಿವಿದನಾಚಾರ ಸಂಪನ್ನನುತ್ತಮಂ"– ಈ ಎಲ್ಲಾ ಗುಣಗಳೂ ಸುಧನ್ವನವು. ಇದು ರಾಜಕುಮಾರನಾದ ಮಾತ್ರದಿಂದ ಬಂದುದಲ್ಲ. ಅವನ ಸಜ್ಜನ ನಡವಳಿಕೆಯಿಂದ ಬಂದುದು. ರಾಜಕುಮಾರ ಸಚಿವನಿಗೆ ಹೇಳಿದ. "ನೀನು ಅಂಜದೆ ನಿನ್ನ ಕೆಲಸವನ್ನು ಮಾಡು ನಾನು ಆ ಜನಾರ್ದನನಿಗೇ ಶರಣು ಹೋಗುವೆ" ಜನರೆಲ್ಲಾ ಹಾ! ಎಂದಂತೆ ರಾಜಕುಮಾರನನ್ನು ಕುದಿಯುವ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಲಾಯಿತು. ಸುಧನ್ವ ಧನ್ಯಭಾವದಿಂದ ಕೃಷ್ಣನನ್ನು ಪ್ರಾರ್ಥಿಸಿರುವುದನ್ನು ಕವಿ ಮೈದುಂಬಿ ವರ್ಣಿಸಿದ್ದಾನೆ. ಸುಧನ್ವ ಕೃಷ್ಣನನ್ನು ಹೀಗೆ ಪ್ರಾರ್ಥಿಸಿದ;

ಹಿಂದೆ ಪ್ರಹ್ಲಾದನ ಪಾಲಿಸಿದೆ ಗಡ
ದ್ರುಪದ
ನಂದನೆಯ ಮಾನಮಂ ಕಾದೆಗಡ ಭಕ್ತರ್ಗೆ
ಬಂದೆಡರನಾವಗಂ ಪರಿಹರಿದೆಗಡ ದೇವ
ನಿನ್ನಂ ಪೆಸರ್ಗೊಂಡೊಡೆ
ಇಂದು ವೈರಪೊಗುಡಾರಂ
ಕಾಣೆನಕಟಾ ಗೋ
ವಿಂದ ನೀನಲ್ಲದೆ ವಿಚಾರಿಸುವರಿಲ್ಲ ಸಲ
ಹೆಂದು .. ... ...

ನಿರ್ಭಯಚಿತ್ತನಾಗಿ ಹರಿಯನ್ನೇ ಧ್ಯಾನಿಸಿದ ರಾಜಕುಮಾರ ಸುಧನ್ವ. ಅವನ ಲೌಕಿಕ ಭ್ರಮೆಯೆಲ್ಲವೂ ಮಾಯವಾಯಿತು. ಅವನ ಕಣ್ಣ ಮುಂದೆ ಈಗ ಅನನ್ಯ ಶರಣಾಗತ ರಕ್ಷಕನಾದ ಕೃಷ್ಣಮೂರ್ತಿಯೇ ತುಂಬಿದ್ದಾನೆ. ಆ ಕೃಷ್ಣನ ಮಂಗಳಮಯವಾದ ಮೂರ್ತಿ ಕಣ್ಣಮುಂದಿರಲು ಸುಧನ್ವ ಎಣ್ಣೆಯ ಕೊಪ್ಪರಿಗೆಯಲ್ಲಿದ್ದರೂ ಅದು ಶೀತಲವಾದ ಪನ್ನೀರಿನಂತಾಗಿದೆ. ಒಂದೇ ಮನಸ್ಸಿನಿಂದ ಹರಿಯನ್ನು ಧ್ಯಾನಿಸಿದ ಸುಧನ್ವ.

"ಜಯ ಜಯ ಜನಾರ್ದನ ಮುಕುಂದ ಮುರಮರ್ದನ ವಿಜಯಮಿತ್ರ ಗೋವಿಂದ ಪಕ್ಷಿವಾಹನ ಕಮಲನಯನ ಪೀತಾಂಬರ ಘನಶ್ಯಾಮ, ಹರಿ ಕೃಷ್ಣ, ವೈಕುಂಠ ನಾರಾಯಣ, ಕ್ಷಯರಹಿತ, ರಾಮ, ಲಕ್ಷ್ಮೀರಮಣ ನತಸುರಾಲಯಧೇನು. ಭಕ್ತವತ್ಸಲ ಕೃಪಾಕರ, ಮಹಾಭಯನಿವಾರಣ, ನೃಸಿಂಹ, ತ್ರಾಹಿ" ಇವನಿಗೆ ಏನೂ ಆಗದಿದ್ದುದನ್ನು ಕಂಡು ಕುಪಿತರಾದ ಪುರೋಹಿತರು ಇವನು ಅಗ್ನಿಸ್ತಂಭನ ವಿದ್ಯೆಯನ್ನು ಬಲ್ಲನೆಂದು ತಿಳಿದು ಎಳೆನಿಂಬೆಗಳನ್ನು ಹಾಕಿಸಿದರು ಕೊಪ್ಪರಿಗೆಗೆ. ಏನೂ ಆಗಲಿಲ್ಲ.

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

ನಂತರ ತಮ್ಮ ಕೃತ್ಯದಿಂದ ನೊಂದು ತಾವೇ ಕೊಪ್ಪರಿಗೆಗೆ ಹಾರಿದರು. ಸುಧನ್ವನ ಸನ್ನಿಧಾನದಿಂದ ಪುರೋಹಿತರಿಗೂ ಏನೂ ಆಗಲಿಲ್ಲ. ಶ್ರೀಕೃಷ್ಣನ ದಯೆಯಿಂದ ಎಲ್ಲವೂ ಮಂಗಳಮಯವಾಯಿತು. ನೋಟಕರ, ಅರಸ ಅರಸಿಯರ ಕಂಗಳು ಹರ್ಷದಿಂದ ತುಂಬಿಬಂದವು. ತನ್ನನ್ನು ನಂಬಿದವರನ್ನು ಕೈಬಿಡುವುದಿಲ್ಲ ಎಂಬುದನ್ನು ಮತ್ತೊಮ್ಮೆ ತೋರಿಸಿದ ಶ್ರೀಕೃಷ್ಣ. ಸುಧನ್ವನ ಭಕ್ತಿಯ ಪಾರಮ್ಯವನ್ನು ಲೋಕಕ್ಕೇ ಲೋಕವೇ ಕೊಂಡಾಡಿತು. ಕೊನೆಗೆ ಕವಿ ಸುಧನ್ವನ ಚಿತ್ರಣವನ್ನೂ ಕಣ್ಣಿಗೆ ಕಟ್ಟುವಂತೆ ಹೀಗೆ ಕೊಡುತ್ತಾನೆ.

ಪನ್ನೀರುಮಿಂದು ದಿವ್ಯಾಂಬರ
　　　　ವನುಟ್ಟು ಬಾ
ವನ್ನದಿಗುರು ಗೆಲ್ದು ಕಮ್ಮಲರ್ಗಳಂ
　　　　ಸೂಡಿ
ಸನ್ನುತ ಸುಯಕ್ಷ ಕರ್ದಮವನನುಕರಿಸಿ
　　　　ಕತ್ತುರಿ ತಿಲಕವಿಟ್ಟು ಪಣೆಗೆ
ರನ್ನದೊಳವುಗಳನಳವಡಿಸಿ ವೀಳೆಯ
　　　　ಗೊಂಡು
ತನ್ನನುಳಿಹಿದ ದೇವಪುರದ
　　　　ಲಕ್ಷ್ಮೀಪತಿಯ
ನಿನ್ನು ಕಂಡೆಪನೆಂಬ ಹರ್ಷದಿಂ
　　　　ಕಳೆದೋರಿ ಮೆರೆದಂ ಸುಧನ್ವನಂದು ||

ಸುಧನ್ವನು ತನ್ನ ಭಕ್ತಿಭಾವವನ್ನು ಮರೆದುದನ್ನು ಕವಿ ಬಹಳ ಹೃದಯಂಗಮವಾಗಿ ಹೀಗೆ ನಿರೂಪಿಸಿದ್ದಾನೆ. ಕವಿ ಲಕ್ಷ್ಮೀಶನಂತೆ ಸುಧನ್ವನ ಚಿತ್ರಣವನ್ನು ನೀಡಿದವರು ಬಹಳ ಕಡಿಮೆ. ಅನನ್ಯ ಕೃಷ್ಣ ಭಕ್ತನಾದ ಸುಧನ್ವನ ಕಥೆಯನ್ನು ಸುಂದರವಾಗಿ ನಿರೂಪಿಸಿದ ಕವಿ ಲಕ್ಷ್ಮೀಶ ತನ್ನ ಕಾವ್ಯ ಪುಣ್ಯಯದು ಕೃಷ್ಣಚರಿತಾಮೃತಂ ಎಂದು ಹೇಳಿಕೊಂಡಿರುವುದು ಸಹಜವಾಗೇ ಇದೆ.

---

(12ನೇ ಪುಟದಿಂದ)

ಜಯಮಂಗಳಂ ನಿತ್ಯ ಶುಭ ಮಂಗಳಂ–
(ಘಂಟಾ – ಝಂಪೆ)

ಸಂಸ್ಕೃತದಲ್ಲಿರುವ ಈ ಮಂಗಳ ಕೃತಿಯು 'ಪ್ರಹ್ಲಾದನ ಭಕ್ತಿ ವಿಜಯ'ವೆಂಬ ಗೇಯನಾಟಕದ 4ನೆಯ ಅಂಕದ ಕಡೆಯಲ್ಲಿ ಬರುತ್ತದೆ. ಇದರಲ್ಲಿ ಪ್ರಹ್ಲಾದನು ಪರಮಾತ್ಮನನ್ನು ಕುರಿತು 'ಹರಿಯೇ ನಾನು ರಾಜಸ ಗುಣಗಳನ್ನು ಕಿತ್ತೊಗೆದೆ, ನಿನ್ನ ಜಪವೇ ನನ್ನ ಉಸಿರು ನನ್ನ ಪುಣ್ಯದ ಸಾರ ಸರ್ವಸ್ವವೇ ನೀನು' ಎಂದು ಹೇಳುತ್ತಾ ಪರವಶನಾಗಿ 'ಜಯ ಮಂಗಳಂ ನಿತ್ಯ ಶುಭ ಮಂಗಳಂ, ಕರುಣಾರಸಾಕ್ಷ್ಯಾಯ ಕಾಮಾರಿ ವಿನುತಾಯ' ಎಂಬ ಮಂಗಳ ಕೃತಿಯನ್ನು ಹಾಡುತ್ತಾನೆ. ಇದರಿಂದ ನಾಟಕದ 4 ಅಂಕಗಳು ಮುಕ್ತಾಯವಾಗುತ್ತವೆ.

'ಪ್ರಹ್ಲಾದ ಭಕ್ತಿ ವಿಜಯ'ದ ಪ್ರಾರಂಭ 'ಶ್ರೀ ಜಾನಕೀ ಮನೋಹರ ರಾಜೀವ ಭವಾದಿ ವಂದ್ಯ' ಎಂಬ ಶ್ಲೋಕದಿಂದ ತೊಡಗಿ, ಕಡೆಯದಾದ ಫಲಶ್ರುತಿಗೆ ಸಂಬಂಧಿಸಿದ 'ಶ್ರೀರಾಮಬ್ರಹ್ಮ ತನಯ ತ್ಯಾಗರಾಜೇನ ನಿರ್ಮಿತಂ' ಎಂದು ಪ್ರಾರಂಭವಾಗುವ 2 ಶ್ಲೋಕಗಳೂ ಸಹ ಸಂಸ್ಕೃತದಲ್ಲಿ ರಚಿತವಾಗಿದೆ.

ತ್ಯಾಗರಾಜರು ರಚಿಸಿರುವ ಮತ್ತೊಂದ ಗೇಯ ನಾಟಕವಾದ 'ನೌಕಾಚರಿತ್ರ'ವು ಶ್ರೀಕೃಷ್ಣ ಚರಿತ್ರೆಗೇ ಸಂಬಂಧಿಸಿದೆ. ಶ್ರೀಕೃಷ್ಣನು 20 ಜನ ಗೋಪಿಯರೊಂದಿಗೆ ಯಮುನಾನದಿಯಲ್ಲಿ ನೌಕೆಯಲ್ಲಿ ವಿಹರಿಸುವುದೇ ಈ ಗೇಯ ನಾಟಕದ ಕಥಾ ವಸ್ತು. ಇದು ತ್ಯಾಗರಾಜರ ಸ್ವಂತ ಸೃಷ್ಟಿ. ಶೃಂಗಾರ ರಸದಿಂದ ಪ್ರಾರಂಭವಾಗಿ ಮಧುರ ಭಕ್ತಿಯಲ್ಲಿ ಮುಕ್ತಾಯವಾಗುವ ಈ ಗೇಯ ನಾಟಕದ ಮಂಗಳ ಶ್ಲೋಕವೂ ಸಹ 'ತ್ಯಾಗರಾಜ ಕೃತಾಃ ಪುಣ್ಯಕಥಾಂ, ಸಾಧು ಮನೋಹರಾಂ' ಎಂದು ಸಂಸ್ಕೃತದಲ್ಲೇ ರಚಿತವಾಗಿದೆ.

(8ನೇ ಪುಟದಿಂದ)

ದಿಲ್ಲವೋ ಅವನು ಮೋಕ್ಷಕ್ಕೆ ಯೋಗ್ಯನಾಗುತ್ತಾನೆ.

ನಾಸತೋ ವಿದ್ಯತೇ ಭಾವೋ
ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽಂತ
ಸ್ತ್ವನಯೋಸ್ತತ್ತ್ವದರ್ಶಿಭಿಃ ॥ 16

ಜಗತ್ಕಾರಣವಾದ ಮೂಲ ಪ್ರಕೃತಿಗೂ, ಮೂಲನಾದ ಭಗವಂತನಿಗೂ ನಾಶವೆಂಬುದಿಲ್ಲ (ಹಾಗೆಯೇ ಕೆಟ್ಟ ಕೆಲಸದಿಂದ ಎಂದೂ ಶುಭವಿಲ್ಲ ಒಳ್ಳೆಯ ಕೆಲಸದಿಂದ ಎಂದೂ ಕೇಡಾಗದು.) ಈ ಎರಡು ತತ್ತ್ವಗಳ ನಿರ್ಣಯವನ್ನು ತತ್ತ್ವಜ್ಞಾನಿಗಳು ಬಲ್ಲರು.

ಅವಿನಾಶಿ ತು ತದ್ವಿದ್ಧಿ ಯೇನ
ಸರ್ವಮಿದಂ ತತಮ್ ।
ವಿನಾಶಮವ್ಯಯಸ್ಯಾಸ್ಯ
ನ ಕಶ್ಚಿತ್ಕರ್ತುಮರ್ಹತಿ ॥ 17

ಯಾವುದು ಎಲ್ಲೆಡೆಯು ತುಂಬಿದೆಯೋ ಅದು ಎಂದೂ ನಾಶವಾಗತಕ್ಕದಲ್ಲವೆಂದು ತಿಳಿ. ನಾಶವಿಲ್ಲದ ಅದನ್ನು ಹೋಗಲಾಡಿಸುವುದಕ್ಕೆ ಯಾರಿಂದಲೂ ಆಗದು.

ಅಂತವಂತ ಇಮೇ ದೇಹಾ
ನಿತ್ಯಸ್ಯೋಕ್ತಾಃ ಶರೀರಿಣಃ ।
ಅನಾಶಿನೋಽಪ್ರಮೇಯಸ್ಯ
ತಸ್ಮಾದ್ಯುಧ್ಯಸ್ವ ಭಾರತ ॥ 18

ಈ ದೇಹಗಳು ಒಂದಲ್ಲ ಒಂದು ದಿನ ಹೋಗಲೇಬೇಕು. ಒಳಗಿರುವ ಜೀವ ಮಾತ್ರ ನಿತ್ಯ. ಪೂರ್ಣನಾದ ಭಗವಂತನಂತೆ ಅವನಿಗೂ ನಾಶವಿಲ್ಲ. ಆದರಿಂದ ನಿತ್ಯಪೂರ್ಣನಾದ ಭಗವಂತನ ಪೂಜೆ ಎಂದು, ಓ ಅರ್ಜುನ, ಯುದ್ಧ ಮಾಡು.

ಯ ಏನಂ ವೇತ್ತಿ ಹಂತಾರಂ
ಯಶ್ಚೈನಂ ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ
ನಾಯಂ ಹಂತಿ ನ ಹನ್ಯತೇ ॥ 19

ಜೀವನನ್ನು ಯಾರಾದರೂ ಕೊಲ್ಲಬಹುದು ಎಂದಾಗಲಿ ಆಗ ಜೀವ ಸಾಯುತ್ತಾನೆ ಎಂದಾಗಲೀ ತಿಳಿದವರು ಏನನ್ನೂ ತಿಳಿದಿಲ್ಲ. ಏಕೆಂದರೆ ಜೀವ ಕೊಲ್ಲಲೂ ಆರ; ಸಾಯಲೂ ಆರ.

ನ ಜಾಯತೇ ಮ್ರಿಯತೇ ವಾ ಕದಾಚಿತ್
ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ॥ 20

ಇವನು ಎಂದಿಗೂ ಹುಟ್ಟುವುದೂ ಇಲ್ಲ; ಸಾಯುವುದೂ ಇಲ್ಲ. ಇವನು ಮೊದಲು ಇದ್ದನನೆನಿಸಿಕೊಂಡು ಮತ್ತೆ ಇಲ್ಲದವನೂ ಆಗುವುದಿಲ್ಲ. ಇವನು ಭಗವಂತನಂತೆಯೇ ಹುಟ್ಟಿಲ್ಲದವನು, ಸಾವಿಲ್ಲದವನು, ಬದಲಾವಣೆಗೊಳ್ಳದವನು. ಈ ಜೀವ ದೇಹದೊಳಗಿದ್ದೂ ದೇಹ ನಾಶವಾದಾಗ ಅವನು ಸಾಯಲಾರ.

ವೇದಾವಿನಾಶಿನಂ ನಿತ್ಯಂ
ಯ ಏನಮಜಮವ್ಯಯಮ್ ।
ಕಥಂ ಸ ಪುರುಷಃ ಪಾರ್ಥ
ಕಂ ಘಾತಯತಿ ಹಂತಿ ಕಮ್ ॥ 21

ಅರ್ಜುನ, ಈ ಜೀವ ಯಾವ ಕಾರಣಕ್ಕೂ ನಾಶವಾಗದ, ಹುಟ್ಟದ, ರೂಪಾಂತರಗೊಳ್ಳದ ನಿತ್ಯವಸ್ತು ಎಂದು ತಿಳಿದ ಮನುಷ್ಯನು ಯಾರನ್ನಾದರೂ ಹೇಗೆ ಕೊಲ್ಲಿಸುವುದು? ಹೇಗೆ ಕೊಲ್ಲುವುದು?

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾ-
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ 22

ಮನುಷ್ಯ, ಉಟ್ಟ ಬಟ್ಟೆ ಹಳತಾದಾಗ ಅವುಗಳನ್ನು ಬಿಟ್ಟು ಹೊಸವನ್ನು ತೊಟ್ಟು ಕೊಳ್ಳುತ್ತಾನೆ. ಹಾಗೆಯೇ ಜೀವನೂ ತನ್ನ ದೇಹ ಜೀರ್ಣವಾದಾಗ ಅದನ್ನು ತೊರೆದು ಇನ್ನೊಂದು ದೇಹವನ್ನು ಸೇರುತ್ತಾನೆ.

ನೈನಂ ಛಿಂದಂತಿ ಶಸ್ತ್ರಾಣಿ
ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯಂತ್ಯಾಪೋ
ನ ಶೋಷಯತಿ ಮಾರುತಃ ॥ 23

ಇವನನ್ನು ಆಯುಧಗಳು ತುಂಡರಿಸಲಾರವು. ಬೆಂಕಿ ಸುಡಲಾರದು. ನೀರು ನೆನೆಯಿಸಲಾರದು. ಗಾಳಿ ಒಣಗಿಸಲೂ ಆರದು.

ಅಚ್ಛೇದ್ಯೋಽಯಮದಾಹ್ಯೋಽಯಂ
ಅಕ್ಲೇದ್ಯೋಽಶೋಷ್ಯ ಏವ ಚ ।
ನಿತ್ಯಃ ಸರ್ವಗತಃ ಸ್ಥಾಣುಃ
ಅಚಲೋಽಯಂ ಸನಾತನಃ ॥ 24

ಏಕೆಂದರೆ ಇವನು ತುಂಡಾಗದವನು, ಬೇಯದವನು ಮತ್ತು ಒಣಗದವನು. ಏಕೆಂದರೆ ಈ ಜೀವ ಎಂದೆಂದು ಎಲ್ಲೆಡೆಯೂ ತುಂಬಿರುವ, ನಿರ್ವಿಕಾರನೂ, ಅಚಲನೂ ಸನಾತನನೂ ಆದ ಭಗವಂತನ ಪಡಿನೆಳಲು.

ಅವ್ಯಕ್ತೋಽಯಮಚಿಂತ್ಯೋಽಯಂ
ಅವಿಕಾರ್ಯೋಽಯಮುಚ್ಯತೇ ।
ತಸ್ಮಾದೇವಂ ವಿದಿತ್ವೈನಂ
ನಾನುಶೋಚಿತುಮರ್ಹಸಿ ॥ 25

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

ಜೀವನೂ ಭಗವಂತನಂಶೆಯೇ ಇಂದ್ರಿಯಗಳಿಗೆ ಕಾಣಸಿಗದವನು, ಊಹೆಗೆ ನಿಲುಕದವನು, ಬದಲಾವಣೆಗೊಳ್ಳದವನು, ಆದ್ದರಿಂದ ಜೀವನ ನಿಜಸ್ಥಿತಿಯನ್ನು ಅರಿತು ನೀನು ವ್ಯಥೆ ಪಡಬಾರದು.

ಅಥ ಚೈನಂ ನಿತ್ಯಜಾತಂ ನಿತ್ಯಂ
ವಾ ಮನ್ಯಸೇ ಮೃತಮ್ ।
ತಥಾಽಪಿ ತ್ವಂ ಮಹಾಬಾಹೋ
ನೈನಂ ಶೋಚಿತುಮರ್ಹಸಿ ॥ 26

ಒಂದು ವೇಳೆ ದೇಹದ ಮೂಲಕವಾದರೂ ಈ ಜೀವ ನಿರಂತರವಾಗಿ ಹುಟ್ಟುತ್ತಾನೆ, ಸಾಯುತ್ತಾನೆ ಎಂದು ತಿಳಿದರೂ, ಓ ಅರ್ಜುನ, ನೀನು ಅದಕ್ಕಾಗಿ ಹೀಗೆ ದುಃಖಿಸಬೇಕಿಲ್ಲ.

ಜಾತಸ್ಯ ಹಿ ಧ್ರುವೋ ಮೃತ್ಯುಃ
ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ
ನ ತ್ವಂ ಶೋಚಿತುಮರ್ಹಸಿ ॥ 27

ಹುಟ್ಟಿದವನಿಗೆ ಸಾವು ತಪ್ಪಿದ್ದಲ್ಲ; ಸತ್ತವನಿಗೆ ಹುಟ್ಟು ತಪ್ಪಿದ್ದಲ್ಲ. ಆದ್ದರಿಂದ ತಪ್ಪಿಸಲಾಗದ ವಿಷಯದಲ್ಲಿ ತಲೆ ಕೆಡಿಸಿಕೊಂಡೇನು ಫಲ ?

ಅವ್ಯಕ್ತಾದೀನಿ ಭೂತಾನಿ
ವ್ಯಕ್ತಮಧ್ಯಾನಿ ಭಾರತ ।
ಅವ್ಯಕ್ತನಿಧನಾನ್ಯೇವ
ತತ್ರಕಾ ಪರಿದೇವನಾ ॥ 28

ಅರ್ಜುನ, ಪ್ರಾಣಿಗಳೆಲ್ಲ ಕಾಣದ ಕಡೆಯಿಂದ ಬಂದಿವೆ, ನಡುವೆ ಒಂದಿಷ್ಟು ಕಾಲ ಕಾಣಿಸುತ್ತವೆ. ಪುನಃ ಕಾಣದ ಕಡೆಗೇ ತೆರಳುತ್ತವೆ. ಈ ವಿಷಯದಲ್ಲಿ ದುಃಖವೇಕೆ ?

ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಂ
ಆಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ
ಶ್ರುತ್ವಾಽಪ್ಯೇನಂ ವೇದ ನಚೈವ ಕಶ್ಚಿತ್ ॥
29

ಭಗವಂತನ ಪಡಿನೆಳಲಾದ ಈ ಜೀವತತ್ತ್ವವೂ ಒಂದು ವಿಸ್ಮಯ ಎನ್ನುವಂತೆ ಕಾಣುತ್ತದೆ. ವಿಸ್ಮಯವನ್ನು ಬಣ್ಣಿಸುವಂತೆ ಕೆಲವರು ಬಣ್ಣಿಸುತ್ತಾರೆ. ಇನ್ನೊಬ್ಬನು ವಿಸ್ಮಯಗೊಂಡು ಕೇಳುತ್ತಾನೆ. ಕೇಳಿಯೂ ಸರಿಯಾಗಿ ತಿಳಿದುಕೊಂಡವರು ತುಂಬ ವಿರಳ.

ದೇಹೀ ನಿತ್ಯಮವಧ್ಯೋಽಯಂ
ದೇಹೇ ಸರ್ವಸ್ಯ ಭಾರತ ।
ತಸ್ಮಾತ್ಸರ್ವಾಣಿ ಭೂತಾನಿ
ನ ತ್ವಂ ಶೋಚಿತುಮರ್ಹಸಿ ॥ 30

ಅರ್ಜುನ, ಎಲ್ಲರ ದೇಹದಲ್ಲಿರುವ ಈ ಆತ್ಮತತ್ತ್ವ ಕೊಲ್ಲಬರುವಂಥ ವಸ್ತುವಲ್ಲ. ಆದ್ದರಿಂದ ಯಾವ ಪ್ರಾಣಿಯ ಬಗೆಗೂ ನೀನು ವ್ಯಥೆಪಡುವ ಕಾರಣವಿಲ್ಲ.

ಸ್ವಧರ್ಮಮಪಿ ಚಾವೇಕ್ಷ್ಯ
ನ ವಿಕಂಪಿತುಮರ್ಹಸಿ ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್
ಕ್ಷತ್ರಿಯಸ್ಯ ನ ವಿದ್ಯತೇ ॥ 31

(ಯುದ್ಧವು) ನಿನ್ನ ಸಹಜ ಧರ್ಮವೆಂಬುದನ್ನು ನೋಡಿಯಾದರೂ ನೀನು ಕಂಗೆಡಬಾರದು. ಕ್ಷತ್ರಿಯನಿಗೆ ಧರ್ಮಯುದ್ಧಕ್ಕಿಂತ ಬೇರೆ ಶ್ರೇಯಸ್ಸಿಲ್ಲ.

ಯದೃಚ್ಛಯಾ ಚೋಪಪನ್ನಂ
ಸ್ವರ್ಗದ್ವಾರಮಪಾವೃತಮ್ ।
ಸುಖಿನಃ ಕ್ಷತ್ರಿಯಾಃ ಪಾರ್ಥ
ಲಭಂತೇ ಯುದ್ಧಮೀದೃಶಮ್ ॥ 32

ಅರ್ಜುನ, ತಾನಾಗಿ ಒದಗಿಬಂದ ಇಂಥ ಯುದ್ಧವೆಂದರೆ ತೆರೆದಿಟ್ಟ ಸ್ವರ್ಗದ ಬಾಗಿಲು. ಇಂಥ ಯುದ್ಧವನ್ನು ಪುಣ್ಯಶಾಲಿಗಳಾದ ಕ್ಷತ್ರಿಯರು ಪಡೆಯುತ್ತಾರೆ.



ಅಥ ಚೇತ್ತ್ವಮಿಮಂ ಧರ್ಮ್ಯಂ
ಸಂಗ್ರಾಮಂ ನ ಕರಿಷ್ಯಸಿ ।
ತತಃ ಸ್ವಧರ್ಮಂ ಕೀರ್ತಿಂ ಚ
ಹಿತ್ವಾ ಪಾಪಮವಾಪ್ಸ್ಯಸಿ ॥ 33

ಆದರೂ ನೀನು ಧರ್ಮಸಾಧನವಾದ ಈ ಯುದ್ಧವನ್ನು ಮಾಡದೆ ಹೋದರೆ ನಿನ್ನ ಸ್ವದೇಶಕ್ಕೂ ಕೀರ್ತಿಗೂ ಎರವಾಗಿ ಪಾಪವನ್ನಷ್ಟೇ ಪಡೆಯುವೆ.

ಅಕೀರ್ತಿಂ ಚಾಪಿ ಭೂತಾನಿ
ಕಥಯಿಷ್ಯಂತಿ ತೇಽವ್ಯಯಾಮ್ ।
ಸಂಭಾವಿತಸ್ಯ ಚಾಕೀರ್ತಿಃ
ಮರಣಾದತಿರಿಚ್ಯತೇ ॥ 34

ನಿನ್ನ ಈ ಹೇಡಿತನದ ಅಪಕೀರ್ತಿಯ ಕಥೆ ಜನಾಂಗದ ಬಾಯಲ್ಲಿ ಶಾಶ್ವತ ಇತಿಹಾಸವಾಗಿ ಉಳಿಯುತ್ತದೆ. ಗೌರವದಿಂದ ಬದುಕಿದವನಿಗೆ ಕೆಟ್ಟ ಹೆಸರು ಸಾವಿಗಿಂತ ಹೆಚ್ಚಿನದು.

ಭಯಾದ್ರಣಾದುಪರತಂ
ಮಂಸ್ಯಂತೇ ತ್ವಾಂ ಮಹಾರಥಾಃ ।
ಯೇಷಾಂ ಚ ತ್ವಂ ಬಹುಮತೋ
ಭೂತ್ವಾ ಯಾಸ್ಯಸಿ ಲಾಘವಮ್ ॥ 35

ದೊಡ್ಡ ದೊಡ್ಡ ಕಾದಾಳುಗಳು ನೀನು ಯುದ್ಧಕ್ಕೆ ಹೆದರಿ ಹಿಮ್ಮೆಟ್ಟಿದೆಯೆಂದು ತಿಳಿಯುತ್ತಾರೆ. ಅವರಿಗೆ ಗೌರವಪಾತ್ರನಾಗಿದ್ದ ನೀನೇ ಈಗ ಹಗುರವಾಗುತ್ತೀಯೆ.

ಅವಾಚ್ಯವಾದಾಂಶ್ಚ ಬಹೂನ್
ವದಿಷ್ಯಂತಿ ತವಾಹಿತಾಃ ।
ನಿಂದಂತಸ್ತವ ಸಾಮರ್ಥ್ಯಂ
ತತೋ ದುಃಖತರಂ ನು ಕಿಮ್ ॥ 36

ನಿನ್ನ ಹಗೆಗಳು ನಿನ್ನ ತೋಳಬಲವನ್ನು ಹೀಯಾಳಿಸಿ ಆಡಬಾರದ ಕೆಟ್ಟ ಮಾತುಗಳನ್ನು ಆಡುವರು ಅದಕ್ಕಿಂತ ಹೆಚ್ಚಿನ ದುಃಖ ಏನುಂಟು ?

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ
ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।
ತಸ್ಮಾದುತ್ತಿಷ್ಠ ಕೌಂತೇಯ
ಯುದ್ಧಾಯ ಕೃತನಿಶ್ಚಯಃ ॥ 37

ಸತ್ತರೆ, ಸ್ವರ್ಗವನ್ನು ಪಡೆಯುತ್ತಿ. ಗೆದ್ದರೆ ಭೂಮಿಯನ್ನು (ಅರಸನಾಗಿ) ಅನುಭವಿಸುತ್ತಿ. ಆದ್ದರಿಂದ ಅರ್ಜುನ, ಕಾದುವ ನಿರ್ಧಾರ ಮಾಡಿ ಎದ್ದೇಳು.

ಸುಖದುಃಖೇ ಸಮೇ ಕೃತ್ವಾ
ಲಾಭಾಲಾಭೌ ಜಯಾಜಯೌ ।
ತತೋ ಯುದ್ಧಾಯ ಯುಜ್ಯಸ್ವ
ನೈವಂ ಪಾಪಮವಾಪ್ಸ್ಯಸಿ ॥ 38

ಸುಖದುಃಖಗಳು, ಲಾಭನಷ್ಟಗಳು, ಗೆಲುವು ಸೋಲುಗಳು – ಈ ದ್ವಂದಗಳ ಬಗೆಗೆ ಸಮದೃಷ್ಟಿ ತಳೆದು ಯುದ್ಧಕ್ಕೆ ಸಿದ್ಧನಾಗು. ಆಗ ನಿನಗೆ ಪಾಪ ಅಂಟುವುದಿಲ್ಲ.

ಏಷಾ ತೇಽಭಿಹಿತಾ ಸಾಂಖ್ಯೇ
ಬುದ್ಧಿರ್ಯೋಗೇ ತ್ವಿಮಾಂ ಶೃಣು ।
ಬುದ್ಧ್ಯಾಯುಕ್ತೋಯಯಾ ಪಾರ್ಥ
ಕರ್ಮಬಂಧಂ ಪ್ರಹಾಸ್ಯಸಿ ॥ 39

ಅರ್ಜುನ, ಆತ್ಮನ ವಿಚಾರವಾಗಿ ಈ ತಿಳುವಳಿಕೆಯನ್ನು ನಿನಗೆ ಹೇಳಿದ್ದಾಯಿತು. ಈಗ ಅದರ ಉಪಾಯದ ಬಗೆಗೆ ಕೇಳು. ಅರ್ಜುನ, ನೀನು ಇದನ್ನು ತಿಳಿಯುವುದರಿಂದ ಕರ್ಮದ ಕಟ್ಟನ್ನು ಕಳಚಿಕೊಳುತ್ತಿ.

– ( ಸಶೇಷ )

(6 ನೇ ಪುಟದಿಂದ)

ಗಳ ದ್ವಂದ್ವಗಳನ್ನು ದಾಟಿ ಅಖಂಡ ಪರಮಾನಂದದಲ್ಲಿ ಸದಾ ಲೀನರಾಗುತ್ತಾರೆ.

ಇದು ಏಕೆ? ಇದು ಹೇಗೆ? ಎಂದು ಪ್ರಶ್ನೆ ಮಾಡುವ ಜನರಿಗೆ ಮಧುಸೂದನ ಸರಸ್ವತಿಗಳು ಬಹಳ ಸರಳವಾದ, ಅಷ್ಟೇ ಸತ್ವಪೂರ್ಣವಾದ ಸಮಾಧಾನವನ್ನು ಒದಗಿಸಿದ್ದಾರೆ. ಭಾರತೀಯ ವೇದಾದಿ ಶಾಸ್ತ್ರಗಳೆಲ್ಲ 'ಧರ್ಮ', 'ಅರ್ಥ', 'ಕಾಮ', 'ಮೋಕ್ಷ' – ಎಂಬ ನಾಲ್ಕು ಬಾಳಿನ ಗುರಿಗಳನ್ನೂ 'ಪುರುಷಾರ್ಥ'ಗಳೆಂದು ಕಲ್ಪಿಸಿವೆಯಷ್ಟೆ; ಇದನ್ನು ಒಪ್ಪದ ವೇದಾಂತಿಗಳಿಲ್ಲ; ಇದನ್ನು ನಂಬದ ದರ್ಶನಕಾರರೂ ಇಲ್ಲ; ಇದನ್ನು ಅಂಗೀಕರಿಸದ ಕವಿಗಳೂ ಇಲ್ಲ. ಮನುಷ್ಯನ ಸ್ವಭಾವ ಸುಖವನ್ನು ಬಯಸುತ್ತದೆ, ದುಃಖವನ್ನು ದೂರವಿಡಲು ಹವಣಿಸುತ್ತದೆ – ಎಂದಮೇಲೆ ಧರ್ಮವನ್ನೇಕೆ ಆಚರಿಸಬೇಕು? ಅರ್ಥವನ್ನೇಕೆ ಗಳಿಸ ಬೇಕು? ಕಾಮವನ್ನೇಕೆ ಸಾಧಿಸಬೇಕು? ಮೋಕ್ಷಕ್ಕೇಕೆ ಹಂಬಲಿಸ ಬೇಕು? ಎಂಬ ಪ್ರಶ್ನೆಗಳಿಗೆಲ್ಲ ಏನು ಒಂದೇ ಉತ್ತರ ಹೇಳಲು ಸಾಧ್ಯವೋ, ಅದೇ ಉತ್ತರ ಭಕ್ತಿಗೆ ಕೂಡ ಅನ್ವಯಿಸುತ್ತದೆ; ಅಷ್ಟೇ ಅಲ್ಲ, ಮಿಕ್ಕೆಲ್ಲ ಪುರುಷಾರ್ಥಗಳಿಗಿಂತ ಭಕ್ತಿಯೇ ಹೆಚ್ಚಿನದೆಂಬುದನ್ನೇ ಸಮರ್ಥಿಸಿಯೂ ತೋರಿಸುತ್ತದೆ. ಮನುಷ್ಯನ ಬಾಳಲ್ಲಿ ಮತ್ತಾವುದರಿಂದಲೂ ಬಾರದ ವಿಶಿಷ್ಟ ರೀತಿಯ ಆನಂದವೇ ಒಂದೊಂದು ಪುರುಷಾರ್ಥಕ್ಕೂ ಇರುವ ಮೂಲಭೂತ ಸಮರ್ಥನೆ. ಸತ್ಯ ಸದಾಚಾರಗಳನ್ನು ಆಧರಿಸಿ ಬರುವ ಆತ್ಮಾನಂದ, ಹಣದಿಂದ ಬರುವ ಸಂತೃಪ್ತಿ, ಕಾಮದಿಂದ ಬರುವ ಹೃದಯಾನಂದ, ಮೋಕ್ಷದಿಂದ ಉಂಟಾಗುವ ಬ್ರಹ್ಮಾನಂದ – ಇನ್ನೆಲ್ಲಕ್ಕೂ ಸರಿಸಮಾನವಾಗಿ ಭಕ್ತಿಯ ಆರಾಧಕನಿಗೆ ಕೂಡ ಅತ್ಯಂತ ವಿಶಿಷ್ಟವಾದ ಒಂದು ಆನಂದವುಂಟಾಗುತ್ತದೆ. ಈ ಆನಂದ ಸ್ವರೂಪದಲ್ಲಿ ಮತ್ತೆ ಪ್ರಮಾಣದಲ್ಲಿ ಮಿಕ್ಕೆಲ್ಲ ಆನಂದಗಳನ್ನು ಮೀರಿ ನಿಲ್ಲುವಷ್ಟು ಹೆಚ್ಚೂ ಆಗಿರುತ್ತದೆ. ಎಂದ ಮೇಲೆ ಭಕ್ತಿಯನ್ನೂ ಒಂದು ಐದನೆಯ ಪುರುಷಾರ್ಥವೆಂದು ಹೇಳಿದರೂ ಸಲ್ಲುತ್ತದೆ; ಅಥವಾ ಮಿಕ್ಕ ನಾಲ್ಕೂ ಪುರುಷಾರ್ಥಗಳ ಅಂತಸ್ಸಾರವನ್ನೆಲ್ಲ ಹೀರಿಕೊಂಡಿರುವ ಏಕೈಕ ಪರಮ ಪುರುಷಾರ್ಥವೆಂದರೂ ಸಲ್ಲುತ್ತದೆ. ಇದು ವೈಷ್ಣವ ಪರಂಪರೆಯಲ್ಲಿ ಶ್ರೀ ರಾಮಾನುಜ, ಮಧ್ವ, ಚೈತನ್ಯ – ಮುಂತಾದ ಎಲ್ಲ ಆಚಾರ್ಯರ ಹಾಗೂ ಅವರ ಅನುಯಾಯಿಗಳ ಸಾಹಿತ್ಯದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡು ಮಾನವನ ಜೀವನದ ಉನ್ನತಿಗೆ ಹೊಸದೊಂದು ರಾಜಮಾರ್ಗವನ್ನು ನಿರ್ಮಿಸಿದೆ. ಅಂತೆಯೇ ಶೈವಾಗಮ ಪರಂಪರೆಯಲ್ಲಿಯೂ ವಿರಾಜಿಸುತ್ತ ಇದೇ ಶತ ಶತಮಾನಗಳ ನವೋನವ ಸಾಹಿತ್ಯ ಜನನೆಗೆ ಸ್ಫೂರ್ತಿಯನ್ನಿತ್ತಿದೆ.

ಶೈವಾಗಮದ ವಚನಗಳ ಪ್ರಕಾರ ಕರ್ಮಗಳು ಎರಡು ಬಗೆ:– ಪಾಪಕರವಾದವು ಮತ್ತು ಪುಣ್ಯಕರವಾದವು, ಎಂದು. ಪಾಪ ಕರ್ಮಗಳಿಗೆ ನರಕವೇ ಫಲ; ಪುಣ್ಯ ಕರ್ಮಗಳಿಗೆ ಸ್ವರ್ಗ ಫಲ. ಆದರೆ ಈ ಎರಡು ಬಗೆಯ ಕರ್ಮಗಳಿಗೂ ಅಜ್ಞಾನದಿಂದ ಆಚರಿಸಿದಾಗ – ಮೋಕ್ಷದಾಯಕತ್ವವಿಲ್ಲ. ಆದ್ದರಿಂದ ಅಜ್ಞಾನದ ಕರ್ಮಗಳನ್ನು ತೊರೆದು, ಕೇವಲ ಜ್ಞಾನವನ್ನು ಗುರುಕೃಪೆಯಿಂದ ಸಾಧಿಸ ಬೇಕು. ಆಗ 'ಸೋಽಹಂ-ಭಾವ' ಅಥವಾ ಅದ್ವೈತ ಜ್ಞಾನದ ಸಿದ್ಧಿಯಾಗುತ್ತದೆ. ಆದರ ಮೂಲಕ ಕರ್ಮಗಳಿಂದ ಬಿಡುಗಡೆಯೂ ದೊರೆಯುತ್ತದೆ. ಇದು ಕರ್ಮ ಮೋಕ್ಷ ಮಾತ್ರ; ಇದರಲ್ಲಿ ಆನಂದಾಂಶವಿದ್ದರೂ ಜೀವನಿಗೆ ಅದರ ಪೂರ್ಣಾನುಭವವಿರುವುದಿಲ್ಲ. ಈ ಹಿಂದಿನ ಮೂರನ್ನೂ ಬಿಟ್ಟಾಗ ಕೇವಲ ಭಗವಂತನ ಪ್ರಸಾದದಿಂದ ಭಕ್ತಿಯ ಪೂರ್ಣಾನಂದಾನುಭವ ಉಂಟಾಗುತ್ತದೆ. ಮೊದಲನೆಯದು ಕರ್ಮಕಾಂಡ; ಇದರಲ್ಲಿ ಮಾಡತಕ್ಕವನು ನಾನೆಂಬ ಅಭಿಮಾನವಿರುತ್ತದೆ; ಎರಡನೆಯದು ಜ್ಞಾನಕಾಂಡ, ಇಲ್ಲಿ ನಾನು ಮಾಡತಕ್ಕವನಲ್ಲ; ನಾನು ಕೇವಲ ಸಾಕ್ಷಿಯೆಂಬ ಆತ್ಮಜ್ಞಾನವಿರುತ್ತದೆ. ಮೂರನೆಯದು ಭಕ್ತಿಕಾಂಡ. ಈ ಹಂತದಲ್ಲಿ ನಾನು ಕರ್ತನೂ ಅಲ್ಲ, ಸಾಕ್ಷಿಯೂ ಅಲ್ಲ, ಸಾಕ್ಷಾತ್ ಭಗವದಾನಂದದಲ್ಲಿ ಭಾಗಿ ಎಂಬ ಪೂರ್ಣಾನುಭವವಿರುತ್ತದೆ. ಅಜ್ಞಾನಿಯ ಕರ್ಮ ಶಿಲಾರೇಖೆಯಂತೆ ಸ್ಥಿರ; ಜ್ಞಾನಿಯ ಕರ್ಮ ನೆಲದ ಮೇಲೆ ಬರೆದ ಗೆರೆಯಂತೆ ಅಳಿಸಲು ಸುಲಭ; ಭಕ್ತಿಯ ಕರ್ಮವಾದರೋ ನೀರ ಮೇಲಿನ ರೇಖೆಯಂತೆ ತತ್ಕಾಲದಲ್ಲೇ ನಷ್ಟ. ಮೊದಲನೆಯ ಕರ್ಮ ಚಿಪ್ಪಿನಲ್ಲಿ ಬಿದ್ದ ಹನಿ ಮುತ್ತಾಗುವಂತೆ ಫಲಕಾರಕ. ಎರಡನೆಯ ಕರ್ಮ ತಾವರೆಯ ಮೆಲೆಯ ಮೇಲಿನ ನೀರ ಹನಿಯಂತೆ ಫಲರಹಿತ. ಭಕ್ತ ಶಿರೋಮಣಿಯ ಕರ್ಮ ಕಾದ ಕಬ್ಬಿಣದ ಮೇಲೆ ಬಿದ್ದ ನೀರಂತೆ ಅದೃಶ್ಯ ಮತ್ತು ಅಫಲ; ಇದೇ ಪರಾ ಭಕ್ತಿಯ ಅಪೂರ್ವ ವೈಭವ.

> ಶುಕ್ತಿಃ ಕರ್ಮಪದಂ, ಸರೋರುಹದಳಂ
> ಜ್ಞಾನಂ, ಪದಂ ಭಾಕ್ತಿಕಂ
> ತಪ್ತಾಯೋಘನಮೇಘಸಂಸ್ಥಿತ ಪಯೋ
> ಬಿಂದುಸ್ಥಿತಾ ಸಾ ಕ್ರಮಾತ್ ।
> ಸಾಫಲ್ಯಂ ವಿಫಲತ್ವಮಾಕೃತಿತಯಾ
> ಪ್ರಾಯೇಣ ನಾಸಂಗತಾ
> ನಾಮ್ನಾಪ್ಯೇವ ಶಿವಾತ್ಮಿಕಾ ಪರತರಾ
> ಭಕ್ತಿಃ ಕಿಮಾಚಕ್ಷ್ಮಹೇ ॥

---


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

# ವಾರ್ತಾಲಹರಿ

## ಪುರಾಣ ಪ್ರಬೋಧ ಪರೀಕ್ಷಾ ಫಲಿತಾಂಶಗಳು

ಹಿಂದೂ ಧರ್ಮ ರಕ್ಷಣ ಸಂಸ್ಥೆಯವರು ಹಿಂದೂ ಧರ್ಮ ಪ್ರಸಾರ ಕಾರ್ಯದಲ್ಲಿ ಹೈಸ್ಕೂಲು ವಿದ್ಯಾರ್ಥಿಗಳಿಗಾಗಿ ನಡೆಸುತ್ತಿರುವ ಪುರಾಣ ಪ್ರಬೋಧ ಪರಿಕ್ಷಾ ಫಲಿತಾಂಶಗಳು ಹೊರಬಿದ್ದಿವೆ. ಅದರಂತೆ ಪ್ರಾಂತವಟ್ಟದ ಮೊದಲ ಮೂರು ಸ್ಥಾನಗಳನ್ನು ಗಳಿಸಿದ ವಿದ್ಯಾರ್ಥಿಗಳೆಂದರೆ ; ಅನುಕ್ರಮವಾಗಿ

1. ಎನ್. ಮಂಜುನಾಥ – 9ನೇ ತರಗತಿ (ಕೊಡಿಗೇನಹಳ್ಳಿ, ಅನಂತಪುರಂ ಜಿಲ್ಲೆ 80%)
2. ಎಸ್ ವಸುಂಧರ — 10ನೇ ತರಗತಿ (ವೇಪರಾಲ, ಕಡಪ ಜಿಲ್ಲೆ 79 %)
3. ಪಿ. ಶಾಂತ - 8ನೇ ತರಗತಿ (ಮಟ್ವಾಸ, ವರಂಗಲ್ ಜಿಲ್ಲೆ 78 %)

ಈ ಪರೀಕ್ಷೆಗಳಲ್ಲಿ ಭಾಗವಹಿಸಿದ ವಿದ್ಯಾರ್ಥಿಗಳ ಸಂಖ್ಯೆ 9,577 ಆಗಿದ್ದು 604 ಮಂದಿ ಪ್ರಥಮ ವರ್ಗದಲ್ಲೂ 2,081 ಮಂದಿ ದ್ವಿತೀಯ ವರ್ಗದಲ್ಲೂ 4,376 ಮಂದಿ ತೃತೀಯ ವರ್ಗದಲ್ಲೂ ಉತ್ತೀರ್ಣರಾಗಿದ್ದಾರೆ.

ಆಂಧ್ರ ಪ್ರದೇಶದ 23 ಜಿಲ್ಲೆಗಳಿಂದ 394 ಹೈಸ್ಕೂಲುಗಳ 8, 9, 10 ನೇ ತರಗತಿಯ ವಿದ್ಯಾರ್ಥಿಗಳು ಈ ಪರೀಕ್ಷೆಗಳಿಗೆ ಕುಳಿತಿದ್ದು, ಹಿಂದೂ ಧರ್ಮ ರಕ್ಷಣ ಸಂಸ್ಥೆ ನಡೆಸುತ್ತಿರುವ ನಾಲ್ಕನೆಯ ವರ್ಷದ ಪರೀಕ್ಷೆಗಳು ಇವಾಗಿವೆ.

ಪ್ರಾಂತ ಮಟ್ಟದ ಮೊದಲ ಮೂರು ಸ್ಥಾನಗಳನ್ನು ಪಡೆದವರಿಗೂ, ಪ್ರತಿ ಜಿಲ್ಲೆಯಲ್ಲೂ ಮೊದಲ ಮೂರು ಸ್ಥಾನ ಗಳಿಸಿದವರಿಗೂ (ಒಟ್ಟು 72) ಮುಂದೆ ಶ್ರೀ ವೆಂಕಟೇಶ್ವರಸ್ವಾಮಿಯ ಬೆಳ್ಳಿಯ ಡಾಲರ್‌ಗಳನ್ನು ಬಹುಮಾನವಾಗಿ ನೀಡಲಾಗುವುದೆಂದು ಪತ್ರಿಕಾವರದಿ ತಿಳಿಸುತ್ತದೆ.

---

ಅನಿವಾರ್ಯ ಕಾರಣಗಳಿಂದ ಸಪ್ತಗಿರಿ ಪ್ರಕಟನೆಯಲ್ಲಿ ತಡವಾದುದಕ್ಕೆ ಓದುಗರ ಸಹಕಾರವನ್ನು ಕೋರಲಾಗಿದೆ – ಸಂ॥

## ಅನ್ನಮಾಚಾರ್ಯ ೫೭೫ ನೇ ಜಯಂತಿ

ಶ್ರೀ ಅನ್ನಮಾಚಾರ್ಯ ಜಯಂತಿ ಉತ್ಸವಗಳು ತಿರುಪತಿಯ ಶ್ರೀ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ದಿನಾಂಕ 26–3–83 ರಿಂದ 28–5–83 ವರೆಗೆ ಯಶಸ್ವಿಯಾಗಿ ನಡೆದವು. ತತ್ಸಂದರ್ಭದಲ್ಲಿ ಏರ್ಪಡಿಸಲಾಗಿದ್ದ ಸಾಹಿತ್ಯ ಸಂಗೀತ ಸಭೆಗಳಲ್ಲಿ ಆಂಧ್ರಪ್ರದೇಶದ ವಿವಿಧ ವಿದ್ವಾಂಸರು ಭಾಗವಹಿಸಿದ್ದರು. ಈ ಜಯಂತಿಯಲ್ಲಿ ಮತ್ತೊಂದು ವೈಶಿಷ್ಟ್ಯವೆಂದರೆ ಈಚೆಗೆ ನಡೆಯದೆ ಎಂತಿದ್ದ ಶತಾವಧಾನದ ಪುನರುತ್ಥಾನ. ಅಷ್ಟಾವಧಾನ ಪ್ರಕ್ರಿಯೆಯಲ್ಲಿ ಹೆಸರಾದ ಶ್ರೀ ಮೇಡಸಾನಿ ಮೋಹನ್ ಅವರು ಶತವಧಾನದಲ್ಲೂ ಪಂಡಿತ ದಿಗ್ಗಜಗಳಿಂದ ಶ್ಲಾಘನೆಗೆ ಪಾತ್ರರಾದರು.



ಮೇಲುಗಡೆ ಸರ್ವಶ್ರೀ ಪಶುಪತಿ, ಪ್ರೊ॥ ಕೋಟೇಶ್ವರರಾವ್, ಮಾತನಾಡುತ್ತ ಶ್ರೀ ವಿದ್ವಾನ್ ವಿಶ್ವಂ. ಮಧ್ಯದಲ್ಲಿ ಸರ್ವಶ್ರೀ ಪಶುಪತಿ, ಮಾತನಾಡುತ್ತ ಎಸ್. ರಾಜನ್ನಕವಿ, ಬಿ. ರಂಗಯ್ಯ. ಕೆಳಗಡೆಯ ಚಿತ್ರ· ಶತಾವಧಾನಿ ಶ್ರೀ ಮೇಡಸಾನಿ ಮೋಹನ್, ಪ್ರೊ॥ ಜಿ ಎನ್. ರೆಡ್ಡಿ.

# ಕರ್ನಾಟಕದಲ್ಲಿ

## ಎಲ್ಲ ವರ್ಣದವರಿಗೂ ದಾಸದೀಕ್ಷೆ

ಶ್ರೀ ವ್ಯಾಸರಾಜ ಮಠದ ಶ್ರೀ ಶ್ರೀ ವಿದ್ಯಾ ಪಯೋನಿಧಿ ತೀರ್ಥ ಶ್ರೀ ಪಾದಂಗಳವರು ಚಾತುರ್ಮಾಸದಲ್ಲಿ ನಾಲ್ಕು ವರ್ಣದವರಿಗೂ ದಾಸ ದೀಕ್ಷೆ ನೀಡುವ ಹೊಸ ಕಾರ್ಯಕ್ರಮ ಹಾಕಿಕೊಂಡಿದ್ದಾರೆ.

ಕೆಲವು ನಿಯಮಗಳನ್ನು ಒಪ್ಪಿದರೆ ಅವರು ಯಾವ ಜಾತಿಯವರೇ ಆಗಿರಲಿ, ಆಸಕ್ತಿಯಿದ್ದಲ್ಲಿ ದೀಕ್ಷೆ ನೀಡಲು ತಾವು ಸಿದ್ಧವೆಂದು ಸ್ವತಃ ಸ್ವಾಮಿಜೀಯವರೇ ಪತ್ರಿಕಾಗೋಷ್ಠಿಯಲ್ಲಿ ವಿವರಿಸಿದರು.

ಅನೂಚಾನವಾಗಿ ಪಾಲಿಸಿಕೊಂಡು ಬರಲಾಗಿರುವ ನಿಯಮಗಳಿಗೆ ಶ್ರೀ ಸೋಸಲೆ ಮಠವು ಹೆಚ್ಚು ಆದ್ಯತೆ ನೀಡುವುದು ಎಂದು ಸ್ವಾಮಿಜೀಯವರು ನುಡಿದರು. ಕರ್ನೂಲಿನಲ್ಲಿ ಅಗಸ್ಟ್ 4 ರಿಂದ ಶ್ರೀಪಾದಂಗಳು ಚಾತುರ್ಮಾಸ ಕೈಗೊಳ್ಳಲಿದ್ದಾರೆ.

ಆಧಾರ–ಪ್ರಜಾವಾಣಿ.

## ದೇವರಿಗೆ ಪ್ರಿಯವಾದದ್ದು ಭಕ್ತಿಯೇ ವಿನಃ ಜಾತಿಯಲ್ಲ

—ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳು

ದೇವರಿಗೆ ಪ್ರಿಯವಾದದ್ದು ಭಕ್ತಿಯೇ ವಿನಃ ಭಕ್ತನ ಜಾತಿಯಲ್ಲ. ಶಬರಿಯನ್ನು ಶ್ರೀರಾಮ ಅನುಗ್ರಹಿಸಿದ್ದು ಅವಳ ಭಕ್ತಿಯಿಂದಾಗಿಯೇ ಹೊರತು ಅವಳ ಜಾತಿಯಿಂದಲ್ಲ ಎಂದು ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳು ಘೋಷಿಸಿದರು.

ಸ್ವಾಮಿಜೀಯವರು ಆದಿಚುಂಚನಗಿರಿ ಮಹಾಸಂಸ್ಥಾನದಲ್ಲಿ ವಿಶ್ವಹಿಂದೂ ಪರಿಷತ್ತಿನ ಆಶ್ರಯದಲ್ಲಿ ನಡೆಯುತ್ತಿರುವ 15 ದಿನಗಳ ಅರ್ಚಕ ಶಿಕ್ಷಣ ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ, ಜ್ಯೋತಿ ಬೆಳಗುವುದರ ಮೂಲಕ ಶಿಬಿರವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು. ಮುಂದುವರಿದು ಮಾತನಾಡುತ್ತ ಶ್ರೀಪಾದಂಗಳು ಭಕ್ತಿಯ ಪ್ರಸಾರ ಪ್ರಚಾರಗಳಿಂದ ಧರ್ಮ ಜಾಗೃತಿ ಉಂಟಾಗಿ ಭವ್ಯಸಮಾಜವು ರೂಪುಗೊಳ್ಳುವುದೆಂದೂ, ಪೂಜಾ ಕೈಂಕರ್ಯ ನಡೆಸುವ ಸಮಾರಂಭಗಳು ಭಕ್ತಿ ಪ್ರಸಾರದ ಸಾಧನಗಳೆಂದೂ ತಿಳಿಸುತ್ತ, ಅರ್ಚಕರು ಪೂಜಾಪದ್ಧತಿಗಳ ಒಳಮರ್ಮವನ್ನು ಅರಿತು, ಮಂತ್ರಾರ್ಥಗಳನ್ನು ವಿವರಿಸಲು ತಿಳಿದು, ಸರಳವಾದ ಪೂಜಾಪದ್ಧತಿಗಳನ್ನು ರೂಢಿಗೊಳಿಸಬೇಕು ಎಂದು ಕರೆ ನೀಡಿದರು.

ಉದ್ಘಾಟನಾ ಸಭೆಯ ಅಧ್ಯಕ್ಷತೆ ವಹಿಸಿದ್ದ ಆದಿಚುಂಚನಗಿರಿ ಕ್ಷೇತ್ರದ ಶ್ರೀ ಶ್ರೀ ಬಾಲಗಂಗಾಧರ ನಾಥ ಸ್ವಾಮಿಜೀ ಅವರು ಮಾತನಾಡುತ್ತ ಈ ಶಿಬಿರವು ಸಮಾಜದ ಸಮಸ್ತರ ಒಳಿತಿಗಾಗಿ ರೂಪಿತವಾಗಿದೆಯೆಂದು ತಿಳಿಸುತ್ತ ದೇವಾಲಯಗಳ ಆವರಣಗಳನ್ನು ಚೊಕ್ಕಟವಾಗಿಡುವುದು, ಆಗಾಗ್ಗೆ ದೇವಾಲಯಗಳಿಗೆ ಹೋಗಿ ಬರುವುದು ಇತ್ಯಾದಿಗಳಿಂದ ಭಕ್ತಿ ಭಾವ ಹರಡುವುದೆಂದೂ, ಅರ್ಚಕರು ಈ ದಿಸೆಯಲ್ಲಿ ಹೆಚ್ಚು ಪ್ರಯೋಜನಕರವಾದ ಪಾತ್ರವನ್ನು ನಿರ್ವಹಿಸ ಬಹುದೆಂದೂ ತಿಳಿಸಿ ಶಿಬಿರದ ಶಿಕ್ಷಣಾರ್ಥಿಗಳಿಗೆ ಪೂಜಾಸಲಕರಣೆಗಳನ್ನು ನೀಡಿದರು.

ಶಿಬಿರಾಧಿಕಾರಿ ವಿದ್ವಾನ್ ಅಶ್ವತ್ಥಯ್ಯನವರು ಸ್ವಾಗತಿಸಿದ ಸಭೆಯಲ್ಲಿ ಪ್ರಾಂತಸಂಘಟನಾ ಕಾರ್ಯದರ್ಶಿ ಶ್ರೀ ಸದಾನಂದ ಕಾಕಡೆಯವರು ಶಿಬಿರದ ಪ್ರಯೋಜನಗಳನ್ನು ವಿವರಿಸಿದರು. ಶಿಬಿರಕ್ಕೆ ಶುಭ ಕೋರಿ ಕಳುಹಿಸಿದ್ದ ಹಿರಿಯರ ಸಂದೇಶಗಳನ್ನು ಓದಿದ ವಿದ್ವಾನ್ ನರಸಿಂಹ ಮೂರ್ತಿ ಅಯ್ಯಂಗಾರ್ಯರು ವಂದನಾರ್ಪಣೆ ಮಾಡಿದರು

# ಧಾರ್ಮಿಕ ಶಿಕ್ಷಣ ಶಿಬಿರ

ಶಾಲಾ ಶಿಕ್ಷಕರಿಗಾಗಿ ತಿ. ತಿ. ದೇ. ಗಳ ಹಿಂದೂ ಧರ್ಮರಕ್ಷಣ ಸಂಸ್ಥೆ ಪ್ರತಿವರ್ಷವೂ ನಡೆಸುವ ಧಾರ್ಮಿಕ ಶಿಕ್ಷಣ ಶಿಬಿರವು ಮೇ 11–ರಂದು ತಿರುಪತಿಯಲ್ಲಿ ಆರಂಭವಾಗಿ 15 ದಿನಗಳ ಕಾಲ ಯಶಸ್ವಿಯಾಗಿ ನಡೆಯಿತು.

ಶಿಬಿರವನ್ನು ಉದ್ಘಾಟಿಸಿದ ತಿ. ತಿ. ದೇ. ಸಹ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯುಲು ಅವರು ಮಾತನಾಡಿ ಉಪಾಧ್ಯಾಯರೇ ಅಲ್ಲದೆ ವಿದ್ಯಾರ್ಥಿಗಳು, ಪೋಷಕರೂ, ಜೀವನದ ಧಾರ್ಮಿಕ ನೈತಿಕ ಮೌಲ್ಯಗಳ ಒಗ್ಗೆ ಶಿಕ್ಷಣವನ್ನು ಪಡೆಯಬೇಕಾಗಿರುವ ಅಗತ್ಯವನ್ನು ವಿವರಿಸುತ್ತ, ಚಾಲ್ತಿ ವರ್ಷದಲ್ಲಿ ತಿ. ತಿ. ದೇ. 26 ಲಕ್ಷರೂಗಳನ್ನು ಧರ್ಮ ಪ್ರಸಾರಕ್ಕಾಗಿ ವ್ಯಯಮಾಡಲು ತೀರ್ಮಾನಿಸಿದೆ ಎಂದು ತಿಳಿಸಿದರು.

ಶಿಬಿರದ ಉದ್ಘಾಟನಾ ಸಭೆಯ ಅಧ್ಯಕ್ಷತೆ ವಹಿಸಿದ್ದ ಡಾ॥ ಅರ್ಕ ಸೋಮಯಾಜಿ ಅವರು ಮಕ್ಕಳಲ್ಲಿ ದೈವಿಕ ಪ್ರಜ್ಞೆ ಜಾಗ್ರತವಾಗುವಂತೆ ಮಾಡಿ ಸರ್ವತೋಮುಖ ಅಭಿವೃದ್ಧಿಗೆ ಕಾರಕವಾಗುವಂತೆ ವ್ಯಕ್ತಿತ್ವ ನಿರ್ಮಾಣ ಮಾಡುವ ತುರ್ತು ಅಗತ್ಯವಿದೆ ಎಂದರು.

ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ಸಂಸ್ಥೆಯ ಕಾರ್ಯಕ್ರಮಗಳನ್ನು ವಿವರಿಸಿದರು. ತಿ.ತಿ.ದೇ. ಪೌರಸಂಬಂಧ ಶಾಖಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ, ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ಪ್ರಿನ್ಸಿಪಾಲ್ ಶ್ರೀ ಎಂ. ಡಿ. ಬಾಲಸುಬ್ರಹ್ಮಣ್ಯಂ, ಎಸ್. ವಿ. ವಿಶ್ವ ವಿದ್ಯಾಲಯದ ರೀಡರ್ ಡಾ॥ ಎಸ್. ಬಿ. ರಘುನಾಥಾಚಾರ್ಯ, ಶ್ರೀ ಬಲರಾಮಿರೆಡ್ಡಿ ಅವರುಗಳು ನೈತಿಕ ಮೌಲ್ಯಗಳು ಹಾಗೂ ಪರಂಪರಾಗತ ಹಿರಿಮೆಗಳನ್ನು ಹರಡುವಲ್ಲಿ ಉಪಾಧ್ಯಾಯರ ಪಾತ್ರವನ್ನು ಕುರಿತು ಮಾತನಾಡಿದರು.

# ಧಾರ್ಮಿಕ ಶಿಕ್ಷಣ ಶಿಬಿರದ ಮುಕ್ತಾಯ

11–5–83 ರಿಂದ 25–5–83 ರ ವರೆಗೆ ನಡೆದ ಉಪಾಧ್ಯಾಯರ ಧಾರ್ಮಿಕ ಶಿಕ್ಷಣ ಶಿಬಿ



ಧಾರ್ಮಿಕ ಶಿಕ್ಷಣ ಶಿಬಿರದ ಎರಡು ಚಿತ್ರಗಳು: ಮೇಲುಗಡೆ ಮಾತನಾಡುತ್ತಿರುವವರು ಶ್ರೀಮಲ್ಲಾದಿ ಚಂದ್ರಶೇಖರಶಾಸ್ತ್ರಿ, ಕುಳಿತಿರುವವರು ಸರ್ವಶ್ರೀ ಸಮುದ್ರಾಲ ಲಕ್ಷ್ಮಣಯ್ಯ, ರಾವುಲ ಸೂರ್ಯನಾರಾಯಣ ಮೂರ್ತಿ, ಜಿ. ಶಿವಶಂಕರರಾವ್. ಕೆಳಗಡೆ ಮಾತನಾಡುತ್ತಿರುವವರು ಶ್ರೀ ಡಿ. ಸುಬ್ಬರಾಯುಲು, ಕುಳಿತಿರುವವರು ಸರ್ವಶ್ರೀ ಬಲರಾಮರೆಡ್ಡಿ, ಡಾ॥ ಎಂ. ಡಿ. ಬಾಲಸುಬ್ರಹ್ಮಣ್ಯಂ, ಡಾ॥ ಅರ್ಕಸೋಮಯಾಜಿ, ಬಿ. ರಂಗಯ್ಯ, ರಾವುಲ ಸೂರ್ಯನಾರಾಯಣಮೂರ್ತಿ,

## ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಪರಕಾಮಣಿಯಲ್ಲಿ ಕೆಲಸ ಮಾಡುವ ಸೇವಕರಿಗೆ ವಿಶೇಷ ಭತ್ಯವನ್ನು ನೀಡಲು ತೀರ್ಮಾನಿಸಲಾಯಿತು.

× × ×

ಪರಕಾಮಣಿಯಲ್ಲಿ ಕೆಲಸ ಮಾಡುವ ಸರಾಫರಿಗೆ ಪರಕಾಮಣಿಭತ್ಯವಾಗಿ ಈವರೆಗೆ ನೀಡುತ್ತಿದ್ದ ರೂ. 15 ಗಳನ್ನು ರೂ. 20 ಗಳಿಗೆ ಏರಿಸಲು ತೀರ್ಮಾನಿಸಲಾಯಿತು.

× × ×

ತಿರುಮಲೆ–ತಿರುಪತಿ ದೇವಸ್ಥಾನಗಳು ಪ್ರಕಟಿಸಿರುವ ಧಾರ್ಮಿಕ ಸಾಹಿತ್ಯದ ಒಂದೊಂದು ಸೆಟ್ ಅನ್ನು ಹೊರದೇಶಗಳಲ್ಲಿರುವ 'ಆಂಧ್ರ ಅಸೋಷಿಯೇಷನ್' ಗಳಿಗೆ ಉಚಿತವಾಗಿ ನೀಡಲು ತೀರ್ಮಾನಿಸಲಾಯಿತು.

× × ×

ತಿರುಚಾನೂರಿನಲ್ಲಿನ ತೋಲಪ್ಪ ಗಾರ್ಡನ್ಸ್‌ನಲ್ಲಿ ರೂ 25 ಲಕ್ಷದ ವೆಚ್ಚದಲ್ಲಿ ಒಂದು ಹಿರಿಯದಾದ ಕಲ್ಯಾಣ ಮಂಟಪವನ್ನು ನಿರ್ಮಿಸುವ ಸೂಚನೆಯನ್ನು ಒಪ್ಪಲಾಯಿತು. ಈ ಕಲ್ಯಾಣ ಮಂಟಪವನ್ನು ಈಗಿರುವ ಒಂದು ಸಭಾ ಮಂಟಪದ ರೂಪಗೆಡಿಸದೆ ನಿರ್ಮಿಸಲು ಸಾಧ್ಯವೇ ಎಂಬುದನ್ನು ಪರಿಶೀಲಿಸಬೇಕೆಂದು ನಿರ್ಣಯಮಾಡಲಾಯಿತು.

× × ×

ಜಿಲ್ಲೆಲ್ಲಮೂಡಿಯ ಮಾತೃಶ್ರೀ ಓರಿಯಂಟಲ್ ಕಾಲೇಜಿನಿಂದ ಬದಲಿಯಾಗಿ ಶ್ರೀವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರಕ್ಕೆ ನಿರ್ದೇಶಕರಾಗಿ ಕೆಲಸ ನಿರ್ವಹಿಸಲು ಆಗಮಿಸಿದ ಡಾ॥ ಪಿ. ರಾಧಾಕೃಷ್ಣ ಶರ್ಮ ಅವರ ಬದಲಿ ಸೇವಾವಧಿಯನ್ನು 3–7–1983 ರಿಂದ ಒಂದು ವರ್ಷಕಾಲ ವಿಸ್ತರಿಸಲು ತೀರ್ಮಾನಿಸಲಾಯಿತು.

× × ×

1983–84 ರಲ್ಲಿ ತಿರುಪತಿಯಲ್ಲಿ ಆರಂಭವಾಗಲಿರುವ ಶ್ರೀ ಪದ್ಮಾವತೀ ಮಹಿಳಾ ವಿಶ್ವ ವಿದ್ಯಾಲಯದ ಆರಂಭದ ವೆಚ್ಚಗಳಿಗಾಗಿ ರೂ 15 ಲಕ್ಷಗಳನ್ನು ಮಂಜೂರುಮಾಡಿ, ಅದರಲ್ಲಿ ರೂ 5 ಲಕ್ಷಗಳನ್ನು ಮೊದಲಕಂತಿನ ಹಣವಾಗಿ ಬಿಡುಗಡೆ ಮಾಡಲು ತೀರ್ಮಾನಿಸಲಾಯಿತು. ಸದರಿ ಹಣವನ್ನು ಯಾವ ಯಾವಯೋಜನೆಗಳಲ್ಲಿ ತೊಡಗಿಸಲಾಗುವುದೆಂಬ ವಿವರಗಳನ್ನು ನೀಡಬೇಕೆಂದು ಉಪಕುಲಪತಿಗಳನ್ನು ಕೇಳಲು ತೀರ್ಮಾನಿಸಲಾಯಿತು. ★

## ಮುಂದಿನ ಸಂಚಿಕೆಯಲ್ಲಿ .... ....

### ಸಪ್ತಗಿರಿ ಜುಲೈ — 1983

**ವೃಕ್ಷರೂಪೀ ನರಸಿಂಹದೇವರು**
– ಬಿ. ಶ್ಯಾಮಸುಂದರ

**ಧರ್ಮದ ಶಿಕ್ಷಣ**
– ರಘುಸುತ

**ಸ್ವಾಮಿ ವಿವೇಕಾನಂದ**
– ಮು. ಕೃಷ್ಣಪ್ಪ

**ಕುಮಾರವ್ಯಾಸನ ಅಭಿಮನ್ಯು**
– ಸಿ ಎಸ್. ಕೃಷ್ಣಮೂರ್ತಿ

**ಭಕ್ತಿ ಯೋಗ**
– ಡಿ. ಕೃಷ್ಣಯ್ಯಂಗಾರ್

**ರಾಮಾಯಣದಲ್ಲಿ ರಾಜನೀತಿ**
– ಡಾ॥ ಎಸ್. ಅನಂತರಂಗಾಚಾರ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

## 1983

## ಜುಲೈ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 1 | ಶುಕ್ರವಾರ | ತಿರುಚಾನೂರು ಶ್ರೀ ಸುಂದರರಾಜಸ್ವಾಮಿ ಅವತಾರ ಉತ್ಸವಾರಂಭ. |
| 3 | ಭಾನುವಾರ | ತಿರುಚಾನೂರು ಶ್ರೀ ಸುಂದರಾಜಸ್ವಾಮಿ ಅವತಾರೋತ್ಸವ ಸಮಾರೋಪ |
| 15 | ಶುಕ್ರವಾರ | ಮಂಗಾಪುರ ಶ್ರೀಕಲ್ಯಾಣ ವೆಂಕಟೇಶ್ವರಸ್ವಾಮಿ ಸಾಕ್ಷಾತಾರ ವೈಭವ. |
| 17 | ಭಾನುವಾರ | ಕರ್ನಾಟಕ ಸಂಕ್ರಮಣ, ತಿರುಮಲೆಯಲ್ಲಿ ಆನಿವರ ಆಸ್ಥಾನ. |
| 20 | ಬುಧವಾರ | ಶಯನ್ನೈಕಾದಶಿ |
| 21 | ಗುರುವಾರ | ನಾರಾಯಣಗಿರಿಯಲ್ಲಿ ಛತ್ರಸ್ಥಾಪನೆ, ತುಲಸೀ ಮಹಾತ್ಮೆ, ಆಸ್ಥಾನ. |
| 24 | ಭಾನುವಾರ | ವ್ಯಾಸ ಪೂರ್ಣಿಮೆ, ಆಳವಂದಾರ್ ವರ್ಷ ತಿರುನಕ್ಷತ್ರ. |

ರವು ಹಲವಾರು ಪ್ರಸಿದ್ಧ ವಿದ್ವಾಂಸರ ಭಾಗವಹಿಸುವಿಕೆಯಿಂದ ಪ್ರಯೋಜನ ಪಡೆದು 25–5–83 ರಂದು ತಿ.ತಿ.ದೇ. ಪೌರಸಂಬಂಧ ಶಾಖಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರ ಅಧ್ಯಕ್ಷತೆಯಲ್ಲಿ ಸಮಾರೋಪ ಹೊಂದಿತು. ತಿ ತಿ.ದೇ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ, ತಿ.ತಿ ದೇ ಪುರಾಣಿಕ ಶಾಲೆಯ ಪ್ರಿನ್ಸಿಪಾಲ್ ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿ, ಹಾಗೂ ಶಿಕ್ಷಣಾರ್ಥಿ ಅಧ್ಯಾಪಕರು ತಮ್ಮ ಅನುಭವ ಅಭಿಪ್ರಾಯಗಳನ್ನು ತಿಳಿಸಿದ ಈ ಸಭೆಯಲ್ಲಿ ತಿ.ತಿ.ದೇ. ಪುರಾಣಿಕ ಶಾಲೆಯಲ್ಲಿ ಎರಡು ವರ್ಷದ ಶಿಕ್ಷಣ ಪಡೆದ ಆರು ಮಂದಿಗೆ 'ಪುರಾಣಿಕ ಶಿರೋಮಣಿ' ಪ್ರಮಾಣ ಪತ್ರಗಳನ್ನು ಶ್ರೀರಾವುಲ ಸೂರ್ಯನಾರಾಯಣ ಮೂರ್ತಿ ಅವರು ವಿತರಣೆ ಮಾಡಿದರು.

ಆಂಧ್ರ ಪ್ರದೇಶದ ವಿವಿಧ ಜಿಲ್ಲೆಗಳಿಂದ 28 ಮಂದಿ ಅಧ್ಯಾಪಕರು ಭಾಗವಹಿಸಿದ ಧಾರ್ಮಿಕ ಶಿಕ್ಷಣ ಶಿಬಿರದಲ್ಲಿ ಒಟ್ಟು 36 ಉಪನ್ಯಾಸಗಳನ್ನು ನೀಡಲಾಯಿತು ಹಲವಾರು ವರ್ಷಗಳಿಂದ ತಿ.ತಿ ದೇ. ನಡೆಸುತ್ತಿರುವ ಈ ಶಿಕ್ಷಣ ಶಿಬಿರದಲ್ಲಿ ತರಬೇತಿ ಪಡೆದ ಅಧ್ಯಾಪಕರು ತಮ್ಮ ಸ್ಥಳಗಳಲ್ಲಿ ಹಿಂದೂ ಧಾರ್ಮಿಕ ಭಾವವನ್ನು ಹರಡುವಲ್ಲಿ ಉಪಯುಕ್ತ ಕೆಲಸ ಮಾಡುವರು.

ಸಮಾರೋಪ ಸಮಾರಂಭದಲ್ಲಿ ಮಾತನಾಡಿದ ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿಯವರು ಮಾನವ ಜನಾಂಗಕ್ಕೆ ಉಪಯುಕ್ತವಾದ ಮೌಲ್ಯಗಳು ಹಿಂದೂ ಧರ್ಮದಲ್ಲಿವೆಯೆಂದೂ, ಇಲ್ಲಿ ವ್ಯಕ್ತಿ ಪ್ರಾಧಾನ್ಯವಿದೆಯಾದರೂ ವ್ಯಕ್ತಿಯಿಲ್ಲದೆ ಸಮಾಜವೂ ಇಲ್ಲವಾಗಿ ವ್ಯಕ್ತಿಯ ಉದ್ಧಾರದಿಂದಲೇ ಸಮಾಜದ ಉದ್ಧಾರ ಸಾಧ್ಯವೆಂದೂ ತಿಳಿಸುತ್ತ ಹದಿನೈದು ದಿನಗಳಲ್ಲಿ ಇಲ್ಲಿ ಸೇರಿದ ಅಧ್ಯಾಪಕರು ಹೆಚ್ಚಿನ ಪ್ರಯೋಜನ ಪಡೆದಿರುವರೆಂದು ಹೇಳಿದರು.

ಅಧ್ಯಕ್ಷ ಪೀಠದಿಂದ ಮಾತನಾಡುತ್ತ ಶ್ರೀ ರಾವುಲ ಸೂರ್ಯ ನಾರಾಯಣ ಮೂರ್ತಿ ಅವರು ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಇಂತಹ ಕಾರ್ಯಕ್ರಮಗಳಲ್ಲಿ ವಿವಿಧ ಕಡೆಗಳಿಂದ ಒಂದೆಡೆ ಕೂಡುವ ಜನ ತಮ್ಮ ತಮ್ಮಲ್ಲಿ ವಿಚಾರ ವಿನಿಮಯ ಮಾಡಿಕೊಳ್ಳುತ್ತ ಸಮಾನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದು ಸುಲಭವಾಗುವುದೆಂದೂ ನುಡಿದರು.

ಶಿಬಿರದಲ್ಲಿ ಭಾಗವಹಿಸಿದ ಉಪಾಧ್ಯಾಯರಿಗೆಲ್ಲ ಪ್ರಮಾಣ ಪತ್ರಗಳನ್ನೂ ತಿ.ತಿ ದೇ. ಪ್ರಕಟಿಸಿದ ಧಾರ್ಮಿಕ ಕೃತಿಗಳನ್ನೂ ವಿತರಣೆ ಮಾಡಲಾಯಿತು.



Edited and Published on behalf of the T. T. Devasthanams by K. Subba Rao, M. A., and Printed at
T. T. D. Press by M. Vijayakumar Reddy, Manager, T. T. D. Press, Tirupati - 517 501

